ಕರ್ಣಾಟಕ ಕಾವ್ಯಕಲಾನಿಧಿ- ನಂ ೧೭.

ಶ್ರೀಮನ್ಮಹೀಶೂರ ಮಹಾಸಂಸ್ಥಾನಾಧೀಶ

ಶ್ರೀಮದ್ರಾಜಾಧಿರಾಜ

ಶ್ರೀ ಚಿಕದೇವ ಮಹಾರಾಜ ವಿರಚಿತಮಪ್ಪ

ದಿವ್ಯಪ್ರಬಂಧಂಗಳೊಳ್

# ಶ್ರೀ ಗೀತಗೋಪಾಲಂ



ಎಸ್. ಜಿ. ನರಸಿಂಹಾಚಾರ್ಯರ್

ಗೌರ್ನಮೆಂಟ್ ಕನ್ನಡ ಟ್ರಾನ್ಸ್ಲೇಟರ್, ಎಜುಕೇಷನ್ ಡಿಪಾರ್ಟ್ಮೆಂಟ್
ಮೈಸೂರು,

ಮತ್ತು

ಮ. ಅ. ರಾಮಾನುಜೈಯಂಗಾರ್

ಅಸಿಸ್ಟೆಂಟ್ ಮಾಸ್ಟರ್ ವೆಸ್ಲಿಯನ್ ಮಿಷನ್ ಹೈಸ್ಕೂಲ್, ಮೈಸೂರು—

ಇವರುಗಳಿಂದ ಪರಿಶೋಧಿಸಲ್ಪಟ್ಟು

ಮೈಸೂರು :

ಜಿ. ಟಿ. ಎ. ಪ್ರೆಸ್ಸಿನಲ್ಲಿ ಮುದ್ರಿತವಾಯಿತು.

1915.

# ಶ್ರೀ ಗೀತಗೋಪಾಲಂ.



## ಪೀಠಿಕೆ.

ಕರ್ಣಾಟಕ ಮಂಡಲಾಧೀಶ್ವರ ಶ್ರೀಚಿಕದೇವ ಮಹಾರಾಜ ವಿರಚಿತವಾದ “ದಿವ್ಯಪ್ರಬಂಧಗಳಲ್ಲಿ” ಈ ಗ್ರಂಥವು ಒಂದಾಗಿದೆ. ಈ ಗ್ರಂಥದ ರಚನೆಯ ವಿಷಯವಾಗಿ ಕವಿಯು ತನ್ನ ಉದ್ದೇಶವನ್ನು ಗ್ರಂಥಾದಿಯಲ್ಲಿ ಈರೀತಿ ಹೇಳಿಕೊಳ್ಳುತ್ತಾನೆ:—

ಕಂ॥ ಅನವಧಿದಯೆಯಿಂದೀಪರಿ।
ಜನಮನಿತುಮನರಸುಗೆಯ್ತುಮಿಂ ಪೊೞ್ದಿಪದೊಳ್॥
ನೆನೆದಂ ಪರಸುಖಮನವ।
ರ್ಗನುಗೊಳಿಪರವಾಪ್ಪುದೆಂದು ಚಿಕದೇವೇಂದ್ರಂ॥

ಪರಿಕಿಸೆ ಪರಿಕಿಸೆ ಕಿವಿಯೊಳ್।
ಪರಾಶರವ್ಯಾಸಮುಖ್ಯಮುನಿಸಮ್ಮತದಿಂ॥
ಹರಿಸಂಕೀರ್ತನಮೊಂದೇ।
ಪರಗತಿಗನುಕೂಲಮೆಂದು ನಿರವಿಸಿ ನೆಗೞ್ದಂ॥

ಪಾಲಂ ಬಯಸಿದ ರೋಗಿಗೆ।
ಪಾಲಿಂದೌಷಧಮನೀವ ವೈದ್ಯನ ತೆಱದಿಂ॥
ದೀಲೋಗರೊಲ್ಪ ಗೀತದ।
ಮೂಲದೊಳೀ ಮುಕ್ತಿಗತಿಯ ಮೊಗದೋಱಿಸಿದಂ॥

ತೊಡರ್ದಿರೆ ನುಡಿಸುಣ್ಣರಗಳ್।
ಬೆಡಂಗು ಮನಮೊಲ್ವು ಗೀತಗೋಪಾಲಮನ॥
ವರ್ಪಡೆದೊಳ್ಗನ್ನಡಗಬ್ಬಮ।
ನೊಡರಿಸಿ ಚಿಕದೇವರಾಯನುನ್ನತಿವೆತ್ತಂ॥

“ಗೀತಗೋಪಾಲ ಮಹಾಪ್ರಬಂಧಂ” ಎಂದು ಕವಿಯು ತಾನೇ ಹೇಳುವುದಱಿಂದ ಈ ಗ್ರಂಥವನ್ನು ಮಹಾ ಪ್ರಬಂಧಗಳ ಗಣನೆಯಲ್ಲಿ ಸೇರಿಸುತ್ತಾನೆಂದು ತೋರುತ್ತದೆ. ಕವಿಯು ಈ ಗ್ರಂಥದಲ್ಲಿ ಪ್ರಸಿದ್ಧವಾದ ಜಯದೇವನ ಗೀತಗೋವಿಂದಕಾವ್ಯದ ಕ್ರಮವನ್ನು ಅನುಸರಿಸಿ, “ಗೋಪಿಕಾವೃತ್ತಾಂತನಿರೂಪಣವ್ಯಾ

ಜದಿಂ ಭಗವದ್ಗುಣಂಗಳಂ," "ಮೋಕ್ಷೋಪಾಯಮಂ ಸಾಧಿಸುವುದರ್ಕೆ ಉಪಾಯಮಾದ ಪ್ರಪತ್ತಿಸ್ವರೂಪಮಂ" ಕೀರ್ತನೆಗಳ ದ್ವಾರಾ ನಿರೂಪಿಸಿ, ತನ್ಮೂಲಕ ವೇದಾಂತತಾತ್ಪರ್ಯಾರ್ಥವನ್ನು ಸಂಗ್ರಹಿಸಿ ಹೇಳಿರುತ್ತಾನೆ.

ಈ ಗ್ರಂಥದಲ್ಲಿ ಪೂರ್ವ ಉತ್ತರ ಎಂಬದಾಗಿ ಎರಡು ಭಾಗಗಳಿವೆ. ಪ್ರತಿ ಭಾಗದಲ್ಲಿಯೂ ಏಳೇಳು ಖಂಡಗಳಿವೆ. ಆ ಪ್ರತಿಯೊಂದು ಖಂಡದಲ್ಲಿಯೂ ಏಳೇಳು ಪದಗಳಿವೆ. ಹೀಗಿರುವುದರಿಂದ ಪ್ರತಿ ಖಂಡಕ್ಕೂ "ಸಪ್ತಪದಿ" ಎಂಬ ಹೆಸರನ್ನು ಕವಿಯು ಕೊಟ್ಟಿರುತ್ತಾನೆ. ಒಂದೊಂದು ಸಪ್ತಪದಿಯಲ್ಲಿ ಒಂದೊಂದು ವಿಷಯವು ಹೇಳಲ್ಪಟ್ಟಿದೆ. ಆಯಾ ವಿಷಯಗಳ ಸಾರಾಂಶವು ಆಯಾ ಸಪ್ತಪದಿಗಳ ಆದಿಯಲ್ಲಿ ವಚನರೂಪವಾಗಿ ಬರೆಯಲ್ಪಟ್ಟಿದೆ. ಈ ಗ್ರಂಥದ ಕೀರ್ತನೆಗಳಲ್ಲಿ ಇತಿಹಾಸ ಪುರಾಣಾದಿಗಳಲ್ಲಿ ಕಂಗೊಳಿಸುವ ಭಾಗವತೋತ್ತಮರ ಸೂಕ್ತ್ಯಭಿಪ್ರಾಯಗಳೂ, "ಆಳ್ವಾರ್" ಎಂಬ ನಾಮದಿಂದ ಪ್ರಸಿದ್ಧರಾದ ಭಕ್ತಾಗ್ರಗಣ್ಯರ ಶ್ರೇಷ್ಠವಾದ ಅಭಿಪ್ರಾಯಗಳೂ ಸಹ ಅಡಕವಾಗಿ ಇವೆ.

ಪ್ರತಿಯೊಂದು ಕೀರ್ತನೆಯಲ್ಲಿಯೂ ಪಲ್ಲವಿ ಚರಣಗಳು ಇವೆ. ಕೀರ್ತನೆಗಳನ್ನು ಹಾಡಲು ಅನುಕೂಲಿಸುವುದಕ್ಕೆ ಆಯಾ ಕೀರ್ತನೆಗಳ ಮೇಲೆ ತಾಳರಾಗಗಳನ್ನು ಕವಿಯು ಕೊಟ್ಟಿರುತ್ತಾನೆ. ಅಲ್ಲದೆ ಆ ಕೀರ್ತನೆಗಳ ತಾತ್ಪರ್ಯವು ಸುಗಮವಾಗುವುದಕ್ಕೆ ಆಯಾ ಕೀರ್ತನೆಗಳ ಆದಿಯಲ್ಲಿ ಒಂದೊಂದು ಕಂದಗಳನ್ನು ಒರೆದಿರುತ್ತಾನೆ. ಈ ಗ್ರಂಥದ ಪದ್ಯಗಳು ಹಳಗನ್ನಡದ ಶೈಲಿಯನ್ನು ಅನುಸರಿಸಿದ್ದರೂ ಕೀರ್ತನೆಗಳು ಮಾತ್ರ ಹೊಸಗನ್ನಡದ ಶೈಲಿಯನ್ನನುಸರಿಸಿವೆ. ಇದರಿಂದ ಸ್ತ್ರೀಬಾಲ ಸಾಮಾನ್ಯವಾಗಿ ಪಂಡಿತ ಪಾಮರರೆಲ್ಲರಿಗೂ ಉಪಯೋಗವಾಗಬೇಕೆಂಬುದೇ ಕವಿಯ ಉದ್ದೇಶವೆಂದು ತೋರುತ್ತದೆ.

ಈ ಗ್ರಂಥದಲ್ಲಿರುವ ಅನೇಕ ಪದ್ಯಗಳು ತಿರುಮಲೆಯಾರ್ಯಕೃತವಾದ "ಅಪ್ರತಿಮವೀರಚರಿತ" "ಚಿಕದೇವರಾಜವಿಜಯ" ಇವೇ ಮೊದಲಾದ ಗ್ರಂಥಗಳಲ್ಲಿ ಸಿಕ್ಕುತ್ತವೆಯಾದುದರಿಂದ, ಧಾವಕಕವಿಯಂತೆ ತಿರುಮಲೆಯಾರ್ಯನೂ ಕೂಡ ಈ ಗ್ರಂಥವನ್ನು ಒರೆದು ಚಿಕದೇವಮಹಾರಾಜರ ಹೆಸರಲ್ಲಿ ಪ್ರಸಿದ್ಧಿಪಡಿಸಿದನೆಂದು ಊಹಿಸಲು ಅವಕಾಶವುಂಟು.

ಮತಾಭಿಪ್ರಾಯಗಳನ್ನು ತಿಳಿಯಲಾಸಕ್ತಿಯುಳ್ಳವರಿಗೆ ಅತ್ಯಾದರಣೀಯವಾಗಿರುವುದರಿಂದಲೂ, ಭಜನೆ ಮಾಡಲು ಅಪೇಕ್ಷೆಯುಳ್ಳ ಭಕ್ತರಿಗೆ ಉಪಯೋಗವಾಗುವುದರಿಂದಲೂ, ಸುಲಭವಾದ ಮಾತುಗಳಿಂದ ಮಹತ್ತಾದ ವಿಷಯಗಳು ಸಂಗೀತಸರಣಿಯಲ್ಲಿ ಹೇಳಲ್ಪಟ್ಟಿರುವ ಕಾರಣ ಹೆಣ್ಣುಮಕ್ಕಳ ಸಂಗೀತ ವಿದ್ಯೆಯಲ್ಲಿ ಅಭಿಮಾನವುಳ್ಳ ಹಿತೈಷಿಗಳಿಗೆ ಸಹಾಯವಾಗಬಹುದಾದುದರಿಂದಲೂ, ಈ ಗ್ರಂಥವನ್ನು ಮುದ್ರಿಸಿರುತ್ತೇವೆ.

# ವಿಷಯ ವಿವರಣ.

## ಪೂರ್ವ ಭಾಗ.



## ಉತ್ತರ ಭಾಗ.

ರಾಗ ॥ ಕೇತಾರಗೌಳ ॥

ಜಗದೊಳ್ ಶ್ರೀಚಿಕದೇವನಿಂ ಪಿರಿಯರಿಲ್ಲೆತ್ತಾನುಮುಂಟಾದೊಡಂ ।
ಬಗೆಗೊಳ್ಗುಂ ಪಟುವಾತಿನೊಳ್ ದೊರೆಯುಮಿಲ್ಲೆತ್ತಾನುಮುಂಟಾದೊಡಂ ॥
ಬಗೆಗೊಳ್ಗುಂ ಪ್ರತಿಬಿಂಬದೊಳ್ ಮಲೆಪರಿಲ್ಲೆತ್ತಾನುಮುಂಟಾದೊಡಂ ।
ಬಗೆಗೊಳ್ಗುಂ ಪ್ರಣಯಾಪರಾಧವಿಧಿಯೊಳ್ ಮೆಯ್ದೋಱುವಿನ್ನಿಲ್ಲಿಯುಂ ॥ ೫
ಅರಸಂ ನೇಹಿಗನೊಲ್ಮೆಗಂ ನೆಱವಿಗಂ ಕಾವಂ ಹಿತಂ ತೆತ್ತಿಗಂ ।
ಸರಸಂ ಮನ್ನಿಪನಾವಗಂ ತಿರುಮಲಾರ್ಯಂಗೆಂಬಿನಂ ಕೋವಿದರ್ ॥
ಪೊರೆದೋೞ್ತೊಲ್ದೊಡನಾಡಿಯೋವಿಪುದಿದಿತ್ತಟ್ಕತ್ತು ಪೆಂಪೇಱುಗುಂ ।
ಬಿರುದಂತೆಂಬರ ಗಂಡಸಪ್ರತಿಮವೀರಂ ಬಲ್ಲರೊಳ್ ಬಲ್ಲಹಂ ॥ ೬

ಮತ್ತಂ,

ರಾಗ ॥ ಆಸಾವೇರಿ ॥

ನೆವಮಿನಿತಿಲ್ಲದೊಳ್ಗುಮೊಸೆಗುಂ ನೆನೆಗುಂ ಬಱಿಕುಂ ದಯಾರಸಂ ।
ಕವಿತರೆ ನಿಟ್ಟಿಕುಂ ಸಲಿಗುಮಾದರಿಕುಂ ಮನವಾಱೆ ಮನ್ನಿಕುಂ ॥
ಸವಿನುಡಿದೋಱುಗುಂ ತಿರುಮಲಾರ್ಯನೊಳಪ್ರತಿಮಪ್ರಭಾವದಿಂ ।
ದವನಿಪುನಾಳ್ಗೆ ಬಾೞ್ಗೆ ಸತತಂ ಚಿಕದೇವನರೇಂದ್ರಚಂದ್ರಮಂ ॥ ೭
ಅನವಧಿಪಯದಿಂದೀಸರಿ ।
ಜನಮನಿತುಮಸರಸುಗೆಯ್ತುದಿಂ ಪೊರೆದಿಪದೊಳ್ ॥
ನೆನೆವಂ ಪರಸುಖಮನವ ।
ಗನಸುಗೊಳಿಪಿರವಾವುದೆಂದು ಚಿಕದೇವೇಂದ್ರಂ ॥ ೮

ರಾಗ ॥ ಮುಖಾರಿ ॥

ಪರಿಕಿಸೆ ಪರಿಕಿಸೆ ಕಿವಿಯೊಳ್ ।
ಪರಾಶರವ್ಯಾಸಮುಖ್ಯಮುನಿಸಮ್ಮತದಿಂ ॥
ಹರಿಸಂಕೀರ್ತನವೊಂದೇ ।
ಪರಗತಿಗನುಕೂಲಮೆಂದು ನಿರವಿಸಿ ನೆಗೞ್ದಂ* ॥ ೯

ರಾಗ ॥ ಶಂಕರಾಭರಣಂ ॥

ಪಾಲಂ ಬಯಸಿದ ರೋಗಿಗೆ ।
ಪಾಲಿಂದೌಷಧಮನೀವ ವೈದ್ಯನ ತೆಱದಿಂ ।

ದೀಲೋಗರೊಲ್ವ ಗೀತವ |
ಮೂಲದೊಳೇ ಮುಕ್ತಿಗತಿಯ ಮೊಗದೋಱಿಸಿದಂ || ೧೦

ತೊಡರ್ದಿ*ರೆ ಸುಡಿಸುಣ್ಣರಗಳ |
ಬೆಡಂಗು ಮನವೊಲ್ದು ಗೀತಗೋಪಾಲವೆಸ ||
ರ್ವಡೆದೊಳ್ಗನ್ನಡಗಬ್ಬಮ |
ನೊಡರಿಸಿ ಚಿಕದೇವರಾಯನುನ್ನತಿವೆತ್ತಂ || ೧೧

ರಾಗ || ಸಾಟಿ || ತಾಳ—ಜಂಪೆ ||

ಗೆಲವುಗೆಲವು । ಗೆಲವು ಗೆಲವಾಸತರಿಗೆಲ್ಲಮನೀವ ।
ಬಲವದಪ್ರತಿಮಗೋಪಾಲರಾಯನಿಗೆ || ಪಲ್ಲವಿ ||

ಚರಣ || ಮನವೊಲಿದು ಸಜ್ಜನರ ಮನ್ನಣೆಯೊಳೋವಿ ದು ।
ರ್ಜನರ ತೊತ್ತೞಿದುೞಿದು ಜಾತಿಧರ್ಮವನು ||
ಅನುಗೊಳಿಸಲವತರಿಸಿ ಯದುಕುಲದಿ ನಂದಗೋ ।
ಪನ ಭಾಗ್ಯಫಲವೆನಿಸಿ ಬಳೆವ ಗೋವಳಗೆ || ೧

ಬೞಿಕ ಪೂತನಿಯುಸುವ ಪಾಲ್ವೆರಸು ಸವಿದೀಂಟಿ ।
ಸುೞಿಗಾಳಿರಕ್ಕಸನ ಸೊಕ್ಕಮುಱಿವಿಕ್ಕಿ ||
ಕಳೆದು ಶಕಟನ ಜೀವಕಳೆಯನೆಣೆವರವನುಡಿ ।
ದಿಳೆಯೊಳಡಗೆಡಹಿ ನಗುವೆಳೆಯ ಗೋವಳಗೆ || ೨

ಪುಸಿಗಱುವ ಮಡುಪಿ ಪೊಸಬಸವನನು ಬಸವೞಿಸಿ ।
ಮಸಗಿ ಖರತುರಗವೆನಿಪಸುರರನು ಗೆಲಿದು ||
ಬಿಸದ ಮಡುವನು ಕಲಕಿ ಪೆಡೆಮೆಟ್ಟಿ ಕಾಳಿಯನ ।
ವಸರಿಸಿದ ಕಾೞ್ಗಿಚ್ಚ ಪರಿದ ಗೋವಳಗೆ || ೩

ತನಗೊಡರಿಸದ ಪೂಜೆ ತಪ್ಪಿದೞಲಿಂದೆ ಕಡು ।
ಗನಲಿಯೆಡೆವಿಡದೆ ಮೞೆಗಱೆವ ವಾಸವನ ||
ತನಿಗೊರ್ವು ತಳಕಿಱಿಯೆ ತಳೆದು ಗೋವರ್ಧನ ।
ವನನುಗೊಳಿಸಿ ಕಱುತುಱುವನಾಳ್ದ ಗೋವಳಗೆ || ೪

ಕೊಳಲ ದನಿಯಿಂದೆ ಗೋವಳಗುವರಿಯರ ಬಗೆಯ ।
ನೊಳಗುಗೆಯ್ದೊಡನಾಟಕೆಳಸಿಯೊಡವೆರಸಿ ||
ಕೆಳೆಂಗೊಡಂಬಡೆ ರಾಸಕೇಳಿಯೊಳು ಸೊಗವಡಿಸಿ ।
ಸುೞಿಸುೞಿದು ನಲಿಸಲಿಪ ಸೊಬಗುಗೋವಳಗೆ || ೫

ರಾಗ ॥ ಮಾಳವಿ ॥ ತಾಳ—ತ್ರಿವುಡೆ ॥

ಗೋವಳರಾಯಾ ಪರಾಕು, ದೇವಾದಿದೇವಾ ॥ ಪಲ್ಲವಿ ॥

ಚರಣ ॥ ಪರಮರಕ್ಷಕ ನಿನ್ನ ಪಾದಾರವಿಂದವ ।
ಸಿರದೊಳು ಪೊಱಲವಸರವೆಳಸಿ ॥
ಪರಭಕ್ತಿಯೊಳು ನಿಂದ ಬ್ರಹ್ಮಾದಿಸುರರೊಳು ।
ಕರುಣಕಟಾಕ್ಷವ ಕಡೆಗೋಡಿಸೊಮ್ಮೆ ॥ ೧

ಜಲಜಲೋಚನ ನಿನ್ನ ಸರಸಗುಣಾಮೃತ ।
ಕಲಿಗಳ ಸವಿದರ್ದೆಗರಗಿ ಸೊರ್ಕಿ ॥
ಒಲಿದು ನಾರದಾದಿಗಳೊಗ್ಗೊರಲೊಳು ನಲಿ ।
ನಲಿದು ಪಾಡುವ ಗಾನವ ಕಿವಿಗೊಳಿಸೊಮ್ಮೆ ॥ ೨

ಎಳೆಸಿರಿನೀಳೆಯುರೆಮೆಯ್ಯ ನಿನ್ನಾಳ್ತನ ।
ದೊಳು ನೆಲೆ ನಿಂದೆನೆಂದೋಜೆಯಿಂದೆ ॥
ಒಳಸಿ ಪರಾಂಕುಶಪರಕಾಲಾದಿಗಳೆಂತು ।
ಬಳೆಯಿಸುವೂಳಿಗಂಗಳ ಬಗೆಗೊಳಿಸೊಮ್ಮೆ ॥ ೩

ರಾಗ ॥ ಕಾಂಬೋಧಿ ॥ ಆದಿತಾಳ ॥

ಅರಿಮುಗುಳನು ಮಿಗೆ ಱಱುದರು ।
ಸರಿಮಿಗಿಲೆನೆ ಸಿರಿಯುರಸನೊಳಸಿಯುರು ॥ ಪಲ್ಲವಿ ॥

ಚರಣ ॥ ಮುಗುಳುನಗೆಯ ಬೆಳಗೊ ತೀಲುವ ಮುದ್ದುನೋಟದ ಬೆಳಗೊ ।
ತಳತಳಿಸುವ ಮಣಿತಾಟಂಕದೊಳಱು ಜಗಿದ ಮುತ್ತಿನ ತನಿಬೆಳ್ಪಳಗೋ ಎನೆ ॥ ೧

ಸೊಗಸುಕಮ್ಮಲರ್ಗಳ ಸೂಸಿದರು ।
ಬಗೆಗಾತಿಯರು ಗೋಪಾಲನ ಮೆಯ್ಯೊಳು ॥ ಪಲ್ಲವಿ ॥

ಚರಣ ॥ ಕರರುಹಗಳವೊಗರೊ ಮುತ್ತಿನುಂಗುರಗಳ ಕುಡಿವೊಗರೊ ।
ಕರಕಮಲದ ಮಣಿಕಡಗದೊಳೊಪ್ಪುವ ವರವಜ್ರಂಗಳ ಬೆಳ್ವೊಗರೋ ಎನೆ ॥ ೨

ವೊಲ್ಲೆಮಲ್ಲಿಗೆಗಳ ಚೆಲ್ಲಿದರು ।
ಚೆಲ್ಲಗಾತಿಯರು ಚೆಲುವ ಗೋವಳನೊಳು ॥ ಪಲ್ಲವಿ ॥

ಚರಣ ॥ ಸೊಗಸುಗೋಪಾಲನೊಳು ಸಜ್ಜನಸನ್ನುತಶೀಲನೊಳು ।
ತಿರುಮಲೆಯಾರ್ಯರ ದೇವರೆನಿಸಿ ಭೂವರಚಿಕದೇವನ ಪೊಱೆದು ಮೆಱೆವನೊಳು ॥ ೩

ವೃ || ಶ್ರೀಮಂತಂ ಯದುಶೈಲವಲ್ಲಭಪದಾಂಭೋಜಾತಭೃಂಗಂ ಗುಣಾ|
ರಾಮಂ ಪಶ್ಚಿಮರಂಗಧಾಮನಗರೀಸಿಂಹಾಸನಾಧೀಶನು ||
ದ್ದಾಮಶ್ರೀಯದುವಂಶಕಲ್ಪಕತರುಪ್ರೌಢಪ್ರವಾಳಂ ಜಗ |
ತ್ಪ್ರೀಮಂಚಿತ್ತು ನೆಗಳ್ಗೆ ಬಾಳ್ಗೆ ಚಿಕದೇವೇಂದ್ರಂ ಮಹೀಚಂದ್ರಮಂ||೧೨

ರಾಗ || ವಸಂತಭೈರವಿ ||

ನಿಗುರಿಸಿ ಗೋಣ್ಗಳಂ ದಿಗಿಭಸಂತತಿ ಸಂತಸಮಿರ್ಪಿನಂ ಮಹೋ |
ರಗಪತಿ ವಿಶ್ರಮಂಬಡೆದು ಮೆಯ್ಮುಱುವಂ ತಳೆಯುತ್ತು ಬಾಳ್ವಿನಂ ||
ಸೊಗವಿಡಿದಾಳ್ವಿನಂ ಕಳೆದು ಬೆಂಬಿಮರಂ ಕಮಠಂ ಧರಿತ್ರಿಯಂ |
ಬಗೆಗೊಳೆ ಬಾಹುಪೂರದೆಸಕಂ ತಳೆದೈ ಚಿಕದೇವಭೂವರಾ || ೧೩

ಅಕ್ಕರವೋದುವಂದೆ ಕುಱುಪಾದುದು ರೂಢಿಯ ಸತ್ಯವಾಕ್ಯಮೂ |
ರ್ಮಕ್ಕಳೊಳಾಡುವಂದೆ ಕುಱುಪಾದುದು ಸಂದ ಪರಾಕ್ರಮಂ ಕರಂ ||
ತಕ್ಕುದು ಚಿಕ್ಕದೇವವಿಭುಗಗ್ಗದ ಸತ್ಯಪರಾಕ್ರಮಾಂಕಮೇ |
ಸಕ್ಕುಮೆ ಮಿಕ್ಕ ಸೊರ್ಕಿನರಮಕ್ಕಳ ಮೊಕ್ಕಳಕಿಂತು ಪೆರ್ಗಳಂ || ೧೪

ವಚನಂ || ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪಾಪ್ರತಿಮವೀರ ಶ್ರೀನರಪತಿ ಚಿಕದೇವಮಹಾರಾಯರೀಗೀತಗೋಪಾಲ ಮಹಾಪ್ರಬಂಧದೆರಡುಂ ಭಾಗದೊಳ್ ಶ್ರೀಮನ್ನಾರಾಯಣನ ಗುಣಾನುಭವವಾದ ನಿತ್ಯಫಲಮಂ ಅವನಡಿದಾವರೆಯೊಳ್ ಸಂಬುಗೆಯೆಂಬ ತದುಪಾಯಮುಮಂ ನಿರೂಪಿಸುವರ್. ಅದಱೊಳ್ ಪ್ರಥಮಭಾಗದೀೞಂ ಸಪ್ತಪದಿಗಳೊಳಂ ಪಲವುಂ ತೆಱದ ಕಲ್ಯಾಣಗುಣಂಗಳನನುಭವಿಸುವರ್. ಇದಱೊಳೊರ್ಮೊದಲ ಸಪ್ತಪದಿಯೊಳ್ ಯಶೋದಾವೃತ್ತಾಂತವ್ಯಾಜದಿಂ ಶ್ರೀಕೃಷ್ಣನ ಬಾಲ್ಯಕೌಮಾರಲೀಲೆಗಳಂ ನಿರೂಪಿಸುವರ್. ಅದೆಂತೆನೆ ;—

ರಾಗ || ಭೂಪಾಳಿ ||

ಕಂ || ಜಗದುದಯಸ್ಥಿತಿವಿಲಯಮ |
ದಿಗಳಿಂದಂ ಲೀಲೆಗೆಯ್ವನಂ ಗೋಪಿ ದಿಟಂ ||
ಮಗುವೆಂದಪ್ಪಿಕ್ಕಿತ್ತೊಡನಮ |
*ರ್ಮಗುಪಾತಿಂ ನಿಟ್ಟದಿಳವಿನಂ ನಿರವಿಸಿದಳ್ || ೧೫

॥ ಆದಿತಾಳ ॥

ಮೂಡವೆಳಗಾಯಿತೆೞ್ಚಱು ಮುದ್ದುಗೋಪಾಲಾ ।
ಆಡುವ ಮಕ್ಕಳು ನಿನ್ನನಱಸುತ್ತೆ ಬಂದಿವೆ ನೋಡು ॥ ಪಲ್ಲವಿ ॥
ಚ ॥ ಮಂಗಳಮೂರುತಿಯೆಳಮಕ್ಕಳ ಮಾಣಿಕವೆ ।
ತಂಗಾಳಿಯು ತಣ್ಪೆ ನೆರೆದಿಂಗಳ ಸೊಂಪೆ ॥
ಮುಂಗುರುಳನೋಸರಿಸಿ ಮೋಹನತಿಲಕಮಿಟ್ಟು ।
ಸಿಂಗರಿಪೆ ನಿನ್ನ ಮಯ್ಸಿಂಗವೆಯೆೞ್ಚಱು ಬೇಗ ॥ ೧
ಕಟ್ಟಾಣಿಮಣಿಯೆಯೆನ್ನ ಕಂದ ಕಣ್ಣ ಪುಣ್ಯವೆ ।
ಪಟ್ಟದ ಕುವರ ಭೂಮಿಭಾಗ್ಯಫಲವೆ ॥
ಕಟ್ಟಿದ ಪೊನ್ನಗೆಜ್ಜೆ ಕಾಲ ಕಡಗ ಘಲಿಘಲಿರೆನೆ ।
ದಟ್ಟಡಿಯಿಡುವ ಕುಲಧನವೆ ನೀನೆೞ್ಚಱು ಬೇಗ ॥ ೨
ಪೊನ್ನ ಪುತ್ತಳಿಯೆ ಪೊಚ್ಚ ಪೊಸಪೂವಿನ ಸೆಂಡೆ ।
ಕನ್ನಡಿಕಳಸವೆಯೆನ್ನ ರನ್ನದೊಡವೆ ॥
ಪೊನ್ನುಡೆಯನುಡಿಸಿ ಮೆಯ್ಯ ಪೊಗರ ಪೊಸತೆನಿಸುವೆ ।
ಎನ್ನೆಳಗೋವಳರಾಯನೆನ್ನಾಸೆಯೆೞ್ಚಱು ಬೇಗ ॥ ೩ —೧—

ರಾಗ ॥ ಮಲಹರಿ ॥

ಕಂ ॥ ವಸುಧೆಯ ಭಾರಮನಿೞಿಸವೆ ।
ಸಿಸುತನದಿಂ ಪ್ರೊಟ್ಟುಗಳೆವ ಪುಣ್ಯಂ ಕಂಡೆ ॥
ಬೞಿಸಿ ಬಿಸರುಹನಾಭನೊಳಂ ।
ತುಸಿದರ್* ಬಿಡುಗಣ್ಣರುಚಿತಕಾರ್ಯೋದಯಮಂ ॥ ೧೬ ॥

॥ ಧ್ರುವತಾಳ ॥

ಎತ್ತಣ ನಿದ್ದೆಯೋೞೇೞು ಗೋಪಾಲಾ ।
ನಿತ್ಯನಿರ್ಮಲ ನಿನಗೇನು ಬಿನದವಿ । ದೆತ್ತಣನಿದ್ದೆಯೋೞೇೞು ಗೋಪಾಲಾ ॥ ಪ ॥
ಪೊಡವಿಯಾಣ್ಮರೆನಿಸಿ ಪುಟ್ಟಿದ ದಾನವರ ।
ಮಡುಹಿ ಪ್ರೇಮದೊಳು ಮನ್ನಿಸಿ ಸಜ್ಜನರ ॥
ವೊಡನೆ ಸದ್ಧರ್ಮಂಗಳನುನ್ನತಿಗೊಳಿಸಿ ಬಂ ।
ದೊಡನಾಡಿಗೋವಳರೊಳೊಡಲುಮಱೆವರೆ ॥ ೧
ಪೊತ್ತಪೊಱೆಯಿೞುಹಿ ಭೂಮಿಯು ಪೊರೆವನೆಂ ।
ದಿತ್ತ ನಂಬುಗೆವಾತನೀಡೇೞಿಸದಿಂತು ॥
ಪತ್ತುಗೆಗೆಯ್ದು ಗೋಪಾಲಕರೊಡನಾಡಿ ।
ಯುತ್ತಮಪುರುಷ ನೀನೊಡಲುಮಱೆವರೆ ॥ ೨

ಮಾಯೆಗೆ ಸಿಲುಕಿ ಮೈಯ್ಮಱೆದಿರ್ಪ ಮಾನವ ।
ರಾಯಸವಡಗಿಸಲವತಾರವೆಸಗಿ ॥
ಬಾಯು ತೆಱೆದು ಮುಕ್ತಿಪದವ ಬಣ್ಣಿಸದೆ ನೀ ।
ನೀಯೆಡೆಯೊಳು ಮಲಗಿರುವುದುಚಿತವೇ ॥೩ —೨—

ರಾಗ ॥ ಮಾಳವಶ್ರೀ ॥

ಕಂ ॥ ಮುಡಿಯಿಂದಡಿವರೆಗಂ ನ ।
ಲ್ದೊಡವುಗಳಂ ತುಡಿಸಲೆಂದು ದಾದಿ ಮನಗೊಂ ॥
ಡೊಡನಾಡಿಗುವರರೊಗ್ಗಿನೊ ।
ಳೊಡೆವೆರೆದೆಬ್ಬಿಸಿ ನುಡಿವಳಿಂತಚ್ಯುತನಂ ॥ ೧೩

ತಾಳ ॥ ತ್ರಿವುಡೆ ॥

ಮಱೆದೊಱಗದಿರೇಳು ಮಗುವೆ ಈ ।
ಕಱುಗಾವ ಮಕ್ಕಳು ಬಂದಿವೆ ಕೃಷ್ಣಾ ॥ ಪಲ್ಲವಿ ॥

ಕುರುಳುಪಟ್ಟಿಯ ನುಣ್ಪುಗೊಳಿಸಿ ಚಂಡಿಕೆಗಟ್ಟಿ ।
ತರವೇಱುಸುವ ತಾತಿಸರವ ಸುತ್ತಿ ॥
ಅರಳೆಲೆಯನು ಹಣೆಗಮರಿಸಿ ಸೊಗಸೆನೆ ।
ತಿರುಮಣಿಕಿಲುಕವ ತಿದ್ದಿ ಕಳಿಪುವೆನು ॥ ೧

ಕಳಿವೆತ್ತ ಮುತ್ತಿನ ಕಡಕು ಹಾಗಾಯಿ ಪ ।
ಜ್ಜಳಿಪ ಬಜ್ಜರದ ಬಾವುಲಿಯನಿಟ್ಟು ॥
ತೊಳಗುವ ನುಣ್ಗಲ್ಲದೊಳು ದಿಟ್ಟಿಯ ಬೊಟ್ಟ ।
ನಳವುಗೊಳಿಸಿ ನಿನ್ನ ಘಳಿಲನೆ ಕಳಿಪುವೆ ॥ ೨

ಕೊರಲ ಸರಿಗೆ ಕಂಟಸರ ಪುಲಿಯುಗು ।
ಗುರು ಪೊಂಜರಪಣಿ ತಾಳಿಯ ಜತೆಗೊಳಿಸಿ ॥
ಹರಿಹರಿಪದಕವ ಪವಣುಗೊಳಿಸಿ ಪೀತಾಂ ।
ಬರವನಳವಡಿಸಿ ಭರದಿ ಕಳಿಪುವೆನು ॥ ೩

ಪೊಳೆವ ರನ್ನದ ಬಾಹುಪುರಿ ಭುಜಕೀರ್ತಿ ತೋ ।
ಳ್ಪಳೆ ತಾತಿಮಣಿಗಳ ಕೆಳೆಗೊಳಿಸಿ ॥
ತೊಳಪ ಮುಂಗೈಮುಱಿ ತೋರಮುತ್ತಿನ ಸರ ।
ತಳುಕಿನುಂಗುರಗಳ ಧರಿಸಿ ಕಳಿಪುವೆನು ॥ ೪

ಒಳುರನ್ನವಿಡಿದ ಪೊನ್ನುಡೆದಾರ ಕಡೆದ ಪ।
ವಳದ ಸವಡಿಸರಗಳನು ಕಟ್ಟಿ ॥
ನಳನಳಿಸುವ ಪಾದಸಳಿನಕಂದುಗೆಗೆಜ್ಜೆ ।
ಗಳನನುಗೊಳಿಸಿ ಸಿಂಗರಿಸಿ ಕಳಿಪುವೆನು ॥ ೫ —೩—

ರಾಗ ॥ ಮಂಗಳಕೈಶಿಕೆ ॥

ಕಂ ॥ ವಾಸವಶಂಕರವಾರಿರು ।
ಹಾಸನರಂ ಪೋಸಗೆಯ್ದ ಮಾಧವನಿರವಂ ॥
ಕಾಸುರಿಯುದೆಳೆಯು ಗೋವಳ ।
ರೋಸರಿಸಲ್ ನುಡಿವರೊಲ್ಮೆಬಲ್ಮೆಗಳಿಂದಂ ॥ ೧೮

ತಾಳ ॥ ಜಂಪೆ ॥

ನಿನ್ನಿಸಾಟವ ಗೆಲಿದು ನೀ ಮಲಗಿದೊಡೆ ಬಿಡುವೆನೆ।
ಇಂದೆನ್ನ ಮೈಮೆಯು ತೋರ್ಪೆನೇಟು ಗೋವಳರಾಯಾ ॥ ಪಲ್ಲವಿ॥
ಉಜ್ಜುಗಿಸಿ ನಾವನಿಬರೊಡ್ಡುಗಾಯಾಡುತಿರೆ ।
ಬಿಜ್ಜುಗಿದಂತೆ ನೀ ಬೇಗ ಬಂದು ॥
ಪಜ್ಜಳಿಸುವೆರ್ದೆಯು ಕೆಂಬರಲಿಂಪೆ ಗುಱುಯಿಟ್ಟು ।
ಗಜ್ಜುಗವ ಗೆಲಿದೆಯುದ ಗರುವರೆಣಿಸುವರೆ ॥ ೧
ಗುಡುಗುಡಾಡುವ ನೆವದಿ ಸಂಗಡಿಗರೊಡವಾಯ್ದು ।
ಗುಡುಗುಡಿಪ ದನಿಯಿನಿಸು ಕುಂದಿ ಬರಲು ॥
ಒಡನೆ ಶಂಖವನೂದಿಯುಟಿದುದನು ಪೂರೈಸಿ ।
ಕಡೆಹಾಯ್ಸಿ ಗೆಲಿದೆಯುದ ಗರುವರೆಣಿಸುವರೆ ॥ ೨
ವೊತ್ತವಡೆದಾವು ಕಣ್ಮುಚ್ಚಾಲೆಯಾಟದೊಳು ।
ಕತ್ತಲೆಮನೆಯೊಕ್ಕು ಕಾಣಿಸದಿರೆ ॥
ಬಿತ್ತರಿಸಿ ಚಕ್ರದೊಳ್ಬೆಳಗ ಮರ್ಬಿನ ಕೊರ್ಬ ।
ಕತ್ತರಿಸಿ ಗೆಲಿದೆಯುದ ಗರುವರೆಣಿಸುವರೆ ॥ ೩ —೪—

ರಾಗ ॥ ಬವುಳಿ ॥

ಕಂ ॥ ಪ್ರಳಯಾಂಬುಧಿಯೊಳ್ ಪವಡಿಸಿ ।
ದೆಳಮೆಯು ತೆಱಿಸಿಂತಿದೆಂಮ ನಿರವಿಸಿ ತಿಳಿವಾ ॥
ಪಚಿಯರ್ ಪಟುನುಡಿಯಿಂ ಗೋ ।
ವಳಗುವರರನ ಕವಡುನಿದ್ದೆಯಂ ಪುಸಿಗೆಯ್ದರ್ ॥ ೧೯

ತಾಳ ॥ ರೂಪಕ ॥

ಮಾಯದ ನಿದ್ದೆಯ ಮಟ್ಟುಗೊಳಿಸಿನ್ನು ।
ಮಾರ್ಕಂಡೇಯನಱುಹಿದನಿದಱಾಯವದೆಮಗೆ ॥ ಪಲ್ಲವಿ ॥

ಚ॥ ಎಲ್ಲಾ ಲೋಕಂಗಳನಿತ್ತೂಯ ನುಂಗಿ ।
ಯುಲ್ಲಾಸಪಡಿಸಿ ನೀನುದರದೊಳಿಟ್ಟು ॥
ಚೆಲ್ಲವಾಡಿದೆ ಗಡ ಜಲನಿಧಿಶಯನ ।
ಬಲ್ಲೆಬಲ್ಲೆವು ನಿನ್ನ ಬಾಲ್ಯದ ಬಗೆಯ ॥ ೧

ಅಂದೇಕಾರ್ಣವದೊಳಾಲದೆಲೆಯೊಳಾ ।
ಸಂದದೊಳೊಱಗಿ ಕೆಯ್ಯಿಂದಿಬ್ಬದುಯ್ದು ॥
ಒಂದು ಕಾಲುಂಗುಟವನೊಲಿದು ಬಾಯೊಳಿಟ್ಟು ।
ಕಂದನಂದದದೊಳಿರ್ದ ಕತೆಯ ಕೇಳಿದುವು ॥ ೨

ಪುಲಿದೊವಲುಡೆಯನು ಬೊಮ್ಮನುಮಂದು ।
ಬಲದ ಮೆಯ್ಯೊಳು ನಾಭಿಪದ್ಮಗರ್ಭದೊಳು ॥
ನೆಲಬಲುಮೆಯೊಳಂತು ನಿರ್ಭಯಮಪಡೆಯೆ ।
ಮಲಗಿದೆ ಗಡ ನಿನ್ನ ಮೆಯ್ಮೆಯಱಿಯಪೆ ॥ ೩ —೫—

ರಾಗ—ನಾರಾಯಣಿ ॥

ಕಂದ ॥ ಪಲವುಂ ಗೋವಳವನೆಯೊಳ್ ।
ಪಲಮೆಯ್ಯಿಂ ಪಲವು ಲೀಲೆಯುಂ ಪಸರಿಸಿ ಮು ॥
ನ್ನೆಲೆಯೊಳ್ ಮಗುವಿತೆ ದೂಱುವ ।
ಲಲನೆಯರಂ ಗೋಪಿ ಜಡಿದು ತಲೆವಾಗಿಸಿದಳ್ ॥ ೨೦

ತಾಳ ॥ ಝಂಪೆ ॥

ಎನ್ನಯ್ಯ ನಿದ್ದೆದಿಳಿದೇಳು ಬೇಗ ।
ಆರಯ್ಯದೀಪರಿ ನಿನ್ನ ರಕ್ಷೆಗೆಯ್ವರ ಮಾತ ಪುಯ್ಯನಿಸುತೆ ॥ ಪಲ್ಲವಿ ॥

ಚ ॥ ಮನೆವೊಕ್ಕು ತಡಕಿ ನೆಲವಿನೊಳು ಪಱಿವಮಾಡಿದೆಳ ।
ಗೆನೆವೊಸರ ಕಂದಲನು ಕೀಱುಗಿಱುಪಿ ॥
ಮನವಾಱಿ ಸವಿದುೞಿದ ಮಡಕೆಗಳನೊಡೆದಿಟ್ಟು ।
ನೆನುತ ದೂಱುವ ಗೋಪವನಿತೆಯರು ನಾಣ್ಚಲೆನ್ನಯ್ಯ ॥ ೧

ಕಱಿವುದಕೆ ಮೊದಲೆಯೆಳಗಱುವನುಣಪಿಟ್ಟೊಡನೆ ।
ತೆಱೆದು ಪಂಜರವ ಗಿಳಿವಱಿಯು ಪಱಿಬಿ ॥

ಮಱಿದೊಱಗಿದರ ಮೊಗಕೆ ಮಸಿಯು ಪೂಸಿದನೆಂದು ।
ಒಱೆದೆ ಬಂದೊದಱುವೀಭಾವೆಯುರು ನಾಣ್ಚಾಲೆ ॥ ೨

ಸಿಸುಗಳಾಡುವ ಬೊಗರಿಸೆಂಡುಗಳನಪಹರಿಸಿ ।
ಮಿಸುಕಿಯಿದಿರಿಸಲವರ ಮೆಚ್ಚೆ ಸದೆದು ॥
ಅಸಿಯುರದ್ದರಿಸಲವರಳವ್ರುಗಿಡಿಸಿದನೆಂದು ।
ಬಸವಱಿದು ಗಳವುವೀಭಾವೆಯುರು ನಾಣ್ಚಾಲೆ ॥ ೩ —೬—

ರಾಗ ॥ ದೇವಗಾಂಧಾರಿ ॥

ಕಂದ ॥ ಪರಮಪ್ರಾಪ್ಯಪ್ರಾಪಕ ।
ಮೆರಡುಂ ಸಿರಿಯುರಸನಡಿಗಳೆಂದಿರ್ಪ ಮಹಾ ॥
ಪುರುಷರ್ ಪ್ರೋಟ್ಟಱಿಯಿರವಂ ।
ದೊರೆಗೊಳಿಸಿದರಾದಿಪುರುಷನೇಱಕವ ಕೇಱಿಸಂ ॥

॥ ಅಟತಾಳ ॥

ಸಪ್ಪಳಗಾದುದು ನವನೀತಚೋರಾ ।
ನಿನ್ನ ಚೆಲ್ವ ನೋಟದ ಕಡೆಸೆಱಗುದೋಱಿಸು ಕೃಷ್ಣಾ ॥ ಪಲ್ಲವಿ ॥

ಚರಣ ॥ ಮುಸುಕಿದ ಸಂಸಾರಮೋಹವಪಡೆಗೆ ನೀ ।
ನೆಸಗುವ ನಸುನೋಟದೆಟ್ಟರದಂತೆ ।
ಮಸುಳಿಸುವಿರುಳಿನ ಮದದುರ್ಬ ಮಗ್ಗಿಸಿ ।
ಮಿಸುಗಿತು ಮೂಡಣ ದೆಸೆ ಮೋಹನಕೃಷ್ಣಾ ॥ ೧

ಓಜೆವಡೆಯೆ ಸತ್ವದೊಡನಿರ್ದ ತಾಮಸ ।
ರಾಜಸಗಳ ತನಿರಸವಾಱುವಂತೆ ॥
ತೇಜದುನ್ನತಿಯೊಳು ತೆರಳಿತು ಕತ್ತಲೆ ।
ರಾಜಿಪ ಸಂಧ್ಯಾರಾಗದೊಡನೆ ಕೃಷ್ಣಾ ॥ ೨

ಬಿಡದೆ ಪಸರಿಸುವ ಬಿನ್ನಣದಿಂದೊಡ ।
ಲಿಡೆಯೊಳೊಪ್ಪುವ ಜೀವದೇಱುಗೆಯಂತೆ ॥
ತೊಡರಿದ ಬಿಸಿಲಿಂದ ತೊಳಗಿತು ನೇಸಱು ।
ಲ್ಲಿಡೆಯೊಳು ಚಿಕದೇವೇಂದ್ರವರದ ಕೃಷ್ಣಾ ॥ ೩ —೭—

ಪ್ರಬೋಧಿಕ ಸಪ್ತಪದಿ ಸಂಪೂರ್ಣಂ.



— ಸಪ್ತಪದಿ — II

ಶರಣಂ ಶ್ರೀ ಚಿಕದೇವ ನಿನ್ನ ಚರಣಂ ಭೀತರ್ಗೆ ಮತ್ತಂ ಭಯೋ —
ತ್ತರಣಂ ನಿನ್ನ ಪದಾಬ್ಜರೇಣುಭರಣಂ ತಾನೇ ಮಗುಳ್ದಾಪದು ॥
ತ್ಸರಣಂ ತಾವಕದಿವ್ಯನಾಮುಕರಣಂ ಮತ್ತಂ ಮಗುಳ್ದಂ ಕುಲೋ ।
ದ್ಧರಣಂ ನಿನ್ನಸಘೋಂಘ್ರಿನಾಸ್ಯವರಣಂ ಬೇಱಿಲ್ಲ ಬೇಱಿಲ್ಲ ಕೇಳ್ ॥ ೨೦

ಆರಾಣ್ಮರ್ ಚಿಕದೇವನಾರ್ ನೆಗಳ್ವರಾಶ್ರೀಚಿಕ್ಕದೇವೇಂದ್ರನಿ ।
ನ್ನಾರೊಳ್ವರ್ ಚಿಕದೇವನಾರ್ ಸಲಹುವರ್ ಶ್ರೀಚಿಕ್ಕದೇವೇಂದ್ರನಿ ॥
ನ್ನಾರೀವರ್ ಚಿಕದೇವನಾರ್ ಬಳೆಯಿಪರ್ ಶ್ರೀಚಿಕ್ಕದೇವೇಂದ್ರನಿಂ ।
ತಾರಾರುಂ ಬೆಸಗೊಳ್ವ ಪೇಳ್ವ ನುಡಿಯೊಳ್ ಶ್ರೀಚಿಕ್ಕದೇವೇಂದ್ರನೇ ॥ ೨೩

ವಚನ ॥ ಇಂತು ಮೊದಲ ಸಪ್ತಪದಿಯೊಳ್ ಶ್ರೀಕೃಷ್ಣನ ಬಾಲ್ಯ ಕೌಮಾರಲೀಲೆಗಳಂ ಭಾವಿಸಿ ಮೇಗಣೈದುಂ ಸಪ್ತಪದಿಯೊಳ್ ಯೌವನಾರಂಭಲೀಲೆಗಳಂ ನಿರೂಪಿಸುವರ್.

ಆದಿತಾಳ ॥ ರಾಗ—ಕಾಂಬೋಧಿ ॥

ಕಂದ ॥ ಪೊಂಗುವ ಪೊಸಮೋಟದ ಗೋ ।
ಪಾಂಗನೆ ತನ್ನಳವುಗಿಡಿಸಿ ಮೆಯ್ಮರೆಯಿಸಿದಾ ॥
ಮಂಗಳಮೂರ್ತಿಯ ಸಿಂಗರ ।
ದಿಂಗಿತಮಂ ಕೆಳದಿಗಿಂತು ಬಿನ್ನೈಸುಗೆ ಪೇಳ್ದಳ್ ॥ ೨೪

ಸೊಗಸುವಸೆಗೆಗಳಿಗೆ ಬಗೆಸೋತೆ ಕಾಣಮ್ಮಾ ।
ನಗೆಮೊಗದ ನಲ್ನುಡಿಯ ನಲವುಗಾಱ ಗೋಪಾಲನ ॥ ಪಲ್ಲವಿ ॥

ಚ ॥ ಮೆಟ್ಟಿದ ಪಾವುಗೆಯೊಳು ಮಿನುಗುವ ಪೊಂಗೆಜ್ಜೆಗಳ ।
ಕಟ್ಟುಲಿಯುಡಿಗಡಿಗೆ ಘಲಿಘುಘಲಿಬೆನೆ ॥
ನೆಟ್ಟನೆಯೊಡವರುವ ನೇಹಿಗರ ನೆರವಿಯೊಳು ।
ಕಟ್ಟಾಣಿಮಣಿಯೊರ್ವನ ಕೈಲಾಗಿನೊಳೆಯ್ತರುವ ॥ ೧

ನಿಂದುನಿಂದಲ್ಲಿಗಲ್ಲಿಗೆ ನೆರಮನೆಮುಂಮನೆಯೊಳಿರುವ ।
ಅಂದಗಾತಿಯರ ಬಗೆಯನಳವುಗಿಡಿಸುತ ।

ಸಂದಿಸಿದ ಕೆಳೆಯರೊಳು ಸರಸವಾಡುವ ನೆವದೊ ।
ಳಂದಚಂದಗಳ ತೋಱುತಾನಂದದೊಳೆಯುತ್ತಿರುವ ॥ ೨

ಬಟ್ಟದೊಡೆಸೋಂಕಿನೊಳು ಪರವಶಗೊಂಡಂತೆ ಬಿಗಿ ।
ದುಟ್ಟ ಪೊಂದಟ್ಟಿಯು ಸಱಿಗೊಯ್ಯನೊಲಿಪು ।
ಕಟ್ಟಿದ ಕಾಂಚಿಯು ಘಂಟೆ ಘಣಘಣಿಪನೆ ಕಾವನ ।
ಪಟ್ಟದಾನೆಯಂತೆ ಮದಪರವಶದೊಳೆಯುತ್ತಿರುವ ॥ ೩

ಪೊಳೆವ ಪೊನ್ನ ಸರಗಳ ಪೊಗರು ಮಿಂಚಿನೊಳೊಗುವಿಂಗೆ ।
ಕಳೆವೆತ್ತ ಕಾರ ಮುಗಿಲ ಕರುವಿಸಂದದಿ ॥
ಬೞಿಕನ್ನವ ಬಯಸದೇಕಭಾವದೊಳು ಬೞಿಸಲು ।
ವೆಳವೆಣ್ಣ ಚಾದಗೆಗಳಿಗಿಂಪುದೋಱುತೆಯುತ್ತಿರುವ ॥ ೪

ಕಡುನೇಹಗಾತಿಯವೊಲು ಕೈಸೇರಿದ ಪೊಂಗೊಳಲ ।
ನುಡಿಸಿ ನುಡಿಸಿ ಸಂತಸವಡುವಂತೆವೊಲು ॥
ಒಡನೆ ಬಾಯೊಳು ಬಾಯ್ವುಱಿಯೊಂದಿರೆಯೊಡಲುಮಱೆತು ।
ಕಡೆಗಣ್ಣ ತೆಱೆಯು ಮಿಗೆ ಕರೆಗಣ್ಮಿಸುತೆಯುತ್ತಿರುವ ॥ ೫ —೧—

ಕಂ ॥ ವೇಣುವ ನುಡಿಸಲ್ ಪೂಡಿದ ।
ತಾಣಕಮಂ ತನ್ನನೊಲಿಪ ಗೆಯ್ತಂಗೆತ್ತು ॥
ಜಾಣೆ ಜಗಧೀಶಸಿರಮಂ ।
ಕಾಣಿಸಿ ತಿಳಿಪುತ್ತೆ ತನ್ನ ಸೊಬಗಂ ಮೆಱೆದಳ್ ॥ ೨೫

ಕೊಳಲ ನುಡಿಪುದೆನ್ನ ಕೂರ್ತ ಕಾಣಮ್ಮ ಎನ್ನ ।
ಕೆಳದಿ ನಿನಗಿದಱೊಳೊಂದೊಳವನೊರೆವೆ ಕೇಳು ॥ ಪಲ್ಲವಿ ॥

ಚ ॥ ಅಡಿಯೊಂದನೂಱಿ ನಿಂದಡಱ ಮುಂದಕೆ ಮತ್ತೊಂ ।
ದಡಿಯನಡವಾಯಿಸುವಂದದಿಂದ ॥
ಕಡೆಗೆ ತೊಲಗದಂತೆನ್ನಡಿಯನಳವಳಿಸಿ ।
ಪಿಡಿದೊತ್ತಿಗೆಱೆದುಯ್ವ ಬೆಡಗ ತೋಱುವನಮ್ಮ ॥ ೧

ಸೊಗಸುಗೊಳಲನಾಂತು ಸೊಗಯಿಪ ತೋಳ್ಗಳ ।
ನೆಗಹಿಯುಮರಿಸುವ ನೆವದೊಳೆನ್ನ ॥
ಬಗೆಗರಗಿಸುತ ಮೇಲ್ವಾಯ್ದು ಪಿಡಿದು ಬಿಗಿ ।
ಬಿಗಿದೆಮರ್ದ*ಪ್ಪುವ ಬೆಡಗ ತೋಱುವನಮ್ಮ ॥ ೨

ಕಡುಸೊಬಗಿಂದ ಕೊಳಲೆಡೆಯೊಳ್ಚೆಂದುಟಿಯನಿ ।
ಟ್ಟೊಡನೆ ಪೂರೈಸುವೊಂದೋಜಿಱಿಂದ ॥
ಸಡಗರ ಮಿಗೆ ಮೊಗಸಸಿಯ ಮೊಗದೊಳಿಟ್ಟು ।
ಬಿಡದೆ ಮುದ್ದಿಸುವೊಂದು ಬೆಡಗ ತೋಱುವನಮ್ಮ ॥ ೩ —೨—

ಕಂ ॥ ಒಡವೆರೆವೆಳವೆಯ ಜವ್ವನ ।
ದೆಡೆಯಾಟದೊಳೆಸೆವ ಕೊಳಲ ಗೋವಳನೊಡಲಂ ॥
ತೊಡ*ರ್ದೊರ್ಗಳ್ವಸದನಮೆಸಟ್ಗಿ* ।
ಣ್ವೆಡಿವಿರೆ ತನ್ನಂತೆಗೆತ್ತು ಕೆಳದಿಯುಸುಸಿರ್ದಳ್ ॥ ೨೬

ಕಣ್ಣಿನಲ್ಲಿ ಕಟ್ಟಿದಂತಿದೆ। ಬಣ್ಣವಾತಲ್ಲವೆನ್ನಂತೆ ಭಾವಿಸಿ ನೋಡಬಾರದೆ ॥ಪ॥

ಚ ॥ ಸೂಡಿದ ಸೋಗೆಗಱಿಯ ಕಡುಸೊಂಪು ।
ಸೊಗಸುವಡೆದ ಸುಱುಗುರುಳಿನ ಗುಂಪು ॥
ಆಡುವ ಮುರುಹುಮಾಗಾಯ್ಗಳ ಪೆಂಪು ।
ಕೂಡೆ ಕುಣಿವ ಕುಡುವುರ್ವಿನಲಂಪು ॥ ೧

ಕೊಳಲೆಡೆಗೆಡೆಗಮರುವ ಕೆಂಬೆರಲು ।
ಕೊನಬುವಡೆಯೆ ಕೊಂಕುವ ಗಱಗೊರಲು ॥
ತಳತಳಿಸುವ ತೇಲುವ ಕಣ್ಮಲರು ।
ತನಿಗಂಪನು ಸೂಸುವ ಸುಯ್ಯೆಲರು ॥ ೨

ಸಿರಿಯೆದೆಯೊಳು ತೊಳಗುವ ಪುಲಿಯುಗುರು ।
ಸಿಂಗರಿಸಿದ ಸಿರಿಗಂದದ ತಿಗುರು ॥
ಕೊರಲ ದಂಡೆಯ ತೊಳಸಿಯ ಪೊಸಚಿಗುರು ।
ತೆರೆಮುಸಗುವ ಪೊಂದುಗುಲದ ಪೊಗರು ॥ ೩

ಮುಳಿದು ಯಶೋದೆ ಕಟ್ಟಿದ ಪೊಡೆದಾರ ।
ಮುದ್ದುವಡೆದ ನೇವಳದುಡಿದಾರ ।
ಬಳಸಿದ ಪವಳಸರದ ಸಿಂಗಾರ।
ಬಣ್ಣದುಡೆಯ ಬಿಗಿದುಟ್ಟ ವೈಯ್ಯಾರ ॥ ೪

ಒಂದಡಿ ತಲದೊಳು ನಿಂದಿಹ ನಿಲವು ।
ಮತ್ತೊಂದಡಿಯನು ಸಾರ್ಚಿದ ಬಲುಗೆಲವು ॥

ಮಂದೆಯ ಪಸುಗಳ ಮನ್ನಿಪ ನಲವು ।
ಮಡವ ಸವಿವ ಸಲ್ಬುಱುವಿನೊಳೊಲವು ॥ ೫ — ೩ —

ಕಂದ॥ ಸಿರಿಗೆಯ್ಗೆ ಸೇರಿ ಕಿವಿಗಿಂ ।
ಚರಮಂ ಕಱಿವಧರಸುಧೆಯನೀಂಟುವ ಕೊಳಲಂ ॥
ಸರಿಸವತಿಗೆತ್ತು ಕಱುಬು ।
ತ್ತೊರೆಸಳ್ ತನ್ನಂತರಂಗಮಂ ಕೆಳದಿಯರೊಳ್ ॥ ೧೭

ಏನು ನೇಮದೊಳಿರ್ದುದೊ ಪೊಂಗೊಳಲೇನೋಂತುದೊ ಕೆಳದಿ ।
ತಾನೊಲಿದಿನಿಯನ ದಕ್ಕುಗೊಳಿಸುತಿದೆ ॥ ಪಲ್ಲವಿ ॥

ಚ ॥ ಪಿಂದು ಮುಂದನಾರಯ್ಯದೆ ಬೆದಱು ಬೇವಸಗೊಳದೆ ।
ಮುಂದುವರಿದಿನಿಯನೊಳು ಮೋಹವಡೆದು ॥
ಕೆಂಪಾವರೆಯೆಸಳ್ಗಳ ಕೆಳೆಗೊಂಡು ಮೆಱೆವ ಕೆಯ್ಯ ।
ಚೆಂದಳದ ಸೋಂಕಿನೊಳು ಸಂದು ಸೊಗವಡುತಿದೆ ॥ ೧

ಬಳಸಿದರ ಬಗೆಯದೆ ಭರದಿಂದ ಪಿಂದೆಗೆಯದೆ ।
ತಳುವದಿನಿಯನೆಣಿಸುವ ದಾರಿವಿಡಿದು ॥
ಅಳುಕದೆಯವನ ಕಿವಿಗಮೃತರಸದ ಸೋನೆಯ ।
ಸಳವುಗೊಳಿಸುತ ಮಿಗೆಯಾನಂದವಡೆಯುತಿದೆ ॥ ೨

ಇವರಿವರಿಗಳುಕದೆಯೆಡಬಲವನೆಣಿಸದೆ ।
ತವಕದಿಂದವನ ಮೊಗದಾವರೆಯೊಳು ॥
ಕವಿದು ಬಾಯೊಳು ಬಾಯಿಟ್ಟು ಪವಳದುಟಿಯೊಳುಜೇನ ।
ಸವಿದು ಸವಿದೀಂಟುತ ಮಿಗೆ ಸಂತಸವಡೆಯುತಿದೆ ॥ ೩ —೪—

ಕಂದ॥ ಇನಿಯಂ ತನ್ನೊಳ್ ಬೞಯಿಸು ।
ವಿನಿಗೆಯ್ತು ಮನೆಸಿತನೆಳಸಿದಳ್ ಮನದೊಳ್ ತಾ ॥
ನನಿತಂ ಕೊಳಲುಲಿಗಳೊಳೇ ।
ಅನುಭವಿಸಿದ ಸೊಗಸನಿಂತು ಕೆಳದಿಯೊಳುಸಿರ್ದಳ್ ॥ ೧೮

ಸೊಗಯಿಸುತಿದೆ । ಕೊಳಲುಲಿಯಿಂತು ಸೊಗಯಿಸುತಿದೆ ।
ಬಗೆಗರಗಿಸಿ ಮಿಗೆ ಪರವಶಗೊಳಿಸುತ ॥ ಪಲ್ಲವಿ ॥
ಚ ॥ ಬಿಗುಹ ಬಿಡಿಸಲೆಂದು ಬೆದಱಿಸುವಂತೊಮ್ಮೆ ।
ಬಗೆಯಱಿತೊಡನೊಡಬಡಿಪಂತೊಮ್ಮೆ ॥

ಸೊಗಸುವಾತುಗಳಿಂದ ಸೊಕ್ಕುಗೊಳಿಪಂತೊಮ್ಮೆ ।
ನಗುತ ನಗುತ ಮಿಗೆ ನಲ್ಲಳಿವಂತೊಮ್ಮೆ ॥ ೧

ಮುನಿದಿದಿರೊಳು ನಿಂದು ಮೂದಲಿಪಂತೊಮ್ಮೆ ।
ಮುನಿಸ ತಿಳುಹಲೆಂದು ಮುದ್ದಿಪಂತೊಮ್ಮೆ ॥
ಇನಿವಾತಿನಿಂದೆಸಗುವಿಜ್ಜಕದಂತೊಮ್ಮೆ ।
ಮನಗರಗಿ ನುಡಿವ ಮಱುಕವಾತಿನಿಂತೊಮ್ಮೆ ॥ ೨

ಕರೆದು ಸಂತಸದೊಳೇಕಾಂತವಾಡುವಂತೊಮ್ಮೆ ।
ಮರುಳುಗೊಳಿಪ ಮೋಹಮಂತ್ರದಂತೊಮ್ಮೆ ॥
ಎರೆಹೊರೆಯಿನಿತಿಲ್ಲದೆಱಕವಾತಿನಂತೊಮ್ಮೆ ।
ಸರಸದೊಳೆಸಗುವ ಸನ್ನೆವಾತಿನಿಂತೊಮ್ಮೆ ॥ ೩ —೫—

ಕಂದ॥ ಸಿಟ್ಟಿಸೆಯಾಲಿಸೆ ಜಾಸಿಸ ।
ಬಟ್ಟವೊಗಂ ವೇಣುನಾದವನಾಮೆಯ್ಗೆರೆಯುಂ ॥
ತೊಟ್ಟನೆ ಕಣ್ಕೆವಿಬಗೆಗಳ್
ಬಟ್ಟಿಗೆ ಬಸನಂದನಂ ಮನಂಬುಗೆ ಕೇಡ್ಡಿಳ್ ॥ ೨೯

ಏವೇಳುವೆನೆನ್ನ ಬಗೆಯು ।
ಗೋವಳರರಸನಿಂತು ಕೋಟಲೆಗೊಳಿಪನಮ್ಮ ॥ ಪಲ್ಲವಿ ॥

ಚ ॥ ನಿಟ್ಟಿಸಿದೆಡೆಯೆಲ್ಲಾ । ತೋಲುವ । ನಿಡಿದಾವರೆಗಣ್ಣ । ಯಿಟ್ಟ ಕಸ್ತುರಿನಾಮದ ಕುಡುವುರ್ಬಿನ । ಬಟ್ಟವೊಗದ ಬಣ್ಣಿಗೆ ಪಸರಿಸುತಿದೆ ॥ ೧

ಆಲಿಸುವೆಡೆಯಲ್ಲಾ । ಅಡಿಗಡಿಗಮೃತದ ಪೊನಲಂತೆ । ಲೀಲೆ ಕೈಮಿಗೆ ಕೊಳಲಿಂದುಣ್ಮುವ ರಾ । ಗಾಲಾಪದೆ ಕಿವಿಗನುಗೊಳಿಸುತಲಿದೆ ॥ ೨

ಸಂದಿಪ ನೆನಹೆಲ್ಲಾ । ಚೆಂದುಟಿಯೊಂದಿದ ಪೊಂಗೊಳಲ । ಒಂದಡಿಯೂಱಿ ಮತ್ತೊಂದಡಿಯುಸು ನಾರ್ಚಿ । ನಿಂದ ನೆಲೆಯುನುಱೆ ಬಂದಿಗೊಳುತಲಿದೆ ॥ ೩ —೬—

ಕಂ ॥ ಎಡೆವಿಡದೆ ಜಾಸದಿಂ ಸಿರಿಯೊಡ ।
ಲೆಡೆಗಳೊಳೊಂದುವೆರಸಿಯುದಱಱೆಸಕಂ ॥
ಬಡಿವೆಸೆವ ತನ್ನ ಚಿತ್ತದ ।
ಕಡುಕೂರ್ಮೆಯನೊರೆಸು ಮೆಱೆವಳೊಳ್ಗದಿಯರೊಳ್ ॥ ೨೯

ಪಲಕ್ಕಿಱನಾಗುತಿದೆ । ಯೆನ್ನ ಮನಸು । ಪಲಕ್ಕಿಱನಾಗುತಿದೆ ।
ಚೆಲುವ ಗೋಪಾಲನ ಮೆಯ್ಸಿರಿಯ ಬಱಿವಿಡಿದು ॥ ಪಲ್ಲವಿ ॥

ಚ ॥ ಸುೞಿಗುರುಳಿನೊಳೞಿ ಸುತ್ತುವರಿಯುತಿದೆ ।
ತೊಳಪ ನುಣ್ಬಣೆಯೊಳು ತೊಳಗುತಿದೆ ॥
ಎಳವೆಱೆನಾಮದೊಳು ಇನಿಸು ಕೊಂಕುತಲಿದೆ ।
ತಳಿರುವ ನೋಟದೊಳು ತಣ್ಪುವಡೆಯುತಿದೆ ॥ ೧

ಸಲಿವ ಪುರ್ಬಿನೊಡನೆ ಸಲಿಸಲಿದಾಡುತಿದೆ ।
ಉಲಿವ ಪೊಂಗೊಳಲೊಡನುಲಿಯುತಿದೆ ॥
ಅಲೆವ ಬೆರಲ್ಗಳೊಡನಲೆವಡೆಯುತಿದೆ ।
ಒಲೆವೊಳುಗೊರಲೊಡನೊಯ್ಯನೊಲೆಯುತಿದೆ ॥ ೨

ಸರಿಸದೊಳ್ಳಡಿಯಂತೆ ಸರಿಸವೆನಿಸುತಿದೆ ।
ಬೆರಲೂಱಿದಡಿಯಂತೆ ಬಿಂಕದೊಳಿರೆ ॥
ನರಪತಿ ಚಿಕದೇವನಾಥ ಶ್ರೀಗೋಪಾಲನ ।
ಸರಸಗುಣಗಳಂತೆ ಸರಸವೆನಿಸುತಿದೆ ॥ ೩ —೭—

ಪ್ರಥಮಾನುರಾಗ ಸಪ್ತಪದಿ ಸಂಪೂರ್ಣಂ.



## —ಸಪ್ತಪದಿ— III

ಪಿಡಿಮ ಕಚಾಗ್ರಮಂ ಸೆಳೆದು ನೀಂ ಜಯಲಕ್ಷ್ಮಿಯನಾಜಿರಂಗದೊಳ್ ।
ತೊಡತೊಡರುತ್ತೆ ಮುಂಬರಿದು ನಿನ್ನಡಿಯಂ ಬಿಡದಿರ್ಪರೊಲ್ಮೆಯಿಂ ॥
ಕುಡೆ ಚಿಕದೇವ ನೀನಭಯಮಂ ಪಗೆವರ್ನಿಜದೇಶಕೋಶಮಂ ।
ಕುಡುವರದೆಂತವರ್ ನಿನಗೆ ನೋಲ್ಪ ಪರಪ್ರತಿಮಾ ವಿಚಾರಿಸಾ ॥ ೩೦

ಅಡರ್ವರ್* ತಾಂ ಮೇರುಶೃಂಗಕ್ಕರಿಗಳಡರೆ ನೀಂ ತನ್ಮಹಾದುರ್ಗಮಂ ಪಾ।
ಯ್ದು ದಿವಸ್ವರ್ದ್ವಾರಮಂ ತಾಮುಱಿಯೆ ರಿಪುಪುರೀಗೋಪುರವ್ರಾತಮಂ ನೀಂ ॥
ಪಿಡಿವರ್ಬ್ರಾಂಬೆಣ್ಡಿರಂ ತಾಂ ಪಿಡಿಯೆ ಜಡಿದುತತ್ಕನ್ಯಕಾರತ್ನಮಂ ನೀಂ ।
ನುಡಿ ನೀನಿಂತಿರ್ದುಮೆಂತಪ್ರತಿಮನೆನಿಸುವೈ ಶೂರಲೋಕೈಕವೀರಾ ॥ ೩೧

ವಚನ || ಈ ಮೂಱನೆಯ ಸಪ್ತಪದಿಯೊಳ್ ಶ್ರೀಕೃಷ್ಣನಂ ಕೂಡಿ ಯಗಲ್ದ ವಿರಹಿಣಿಯರ ವಚನವ್ಯಾಜದಿಂದವನ ಗುಣಂಗಳಂ ಪೇೞ್ವರ್.

ರಾಗ—ಕಾಂಬೋಧಿ || ಆದಿತಾಳ ||

ಮಂಗಳಮೂರುತಿ ಮಿಱ್ೞೋಱನಮ್ಮ | ಮನವಿಡಿದಿರಲಾಱೆನಮ್ಮ ||ಪಲ್ಲವಿ||

ಚ || ನಲಿಯುತೆನ್ನಿದಿರಿಗೆ ನಡೆತಂದನಮ್ಮ | ನಡೆದು ನಾಣ್ಗೆಡಿಸಿದನಮ್ಮ ||
ಹಲವು ಮೆಯ್ಸಿರಿಗಳ ಹರಹಿದನಮ್ಮ | ಹರಹಿ ಹದಗೆಯ್ದನಮ್ಮ || ೧

ಕಡೆಗಣ್ಣ ತೆರೆಗಳ ಕವಿಸಿದನಮ್ಮ | ಕವಿಸಿ ಕೈಗಿಡಿಸಿದನಮ್ಮ ||
ಕುಡುವುರ್ಬುಗಳ ಮಿಗೆ ಕುಣಿಸಿದನಮ್ಮ| ಕುಣಿಸಿ ಕಗ್ಗೊಲೆಗೊಂಡನಮ್ಮ || ೨

ಕೊಳಲ ನುಡಿಸಿ ಮೋಸಗೊಳಿಸಿದನಮ್ಮ | ಗೋಪಾಲನೆಲ್ಲಿದನಮ್ಮ ||
ಒಳುವಗೆಯೊಳಗೆನ್ನನೊಳಗುಗೆಯ್ದನಮ್ಮ | ಒಳಗುಗೆಯ್ದೋವಿದನಮ್ಮ|| ೩ ||

—೧—

ಏವೆನಮ್ಮ | ಏನೆನಮ್ಮ | ಏವೇನೀಮಾಯಕಿನ್ನೇಗೆಯ್ವೆನಮ್ಮ || ಪ ||

ಚ || ಎರೆಹೊರೆಯಿಲ್ಲದವೊಲಿರುವನಮ್ಮ | ಒಡನಿರುವನಮ್ಮ |
ಒಱೆದೆ ಬೆಱೆವ್ರದೆ ಸರಿಯಾಗುಬೇಗೆ ಬೇಱೆಯಮ್ಮ ||
ಪರಿಪರಿದು ಪಡದ ಪಾಡುವಡಿಪನಮ್ಮ |
ಕಡೆಗೆ ಪರಿಕಿಸೆ ತಾನಲ್ಲವೆಂದು ಪರಿವನಮ್ಮ || ೧ ||

ಪುಟ್ಟಗೆಯ್ಮೆ ನಾಡಂತಲ್ಲ ಪೊಸತಮ್ಮ | ಪೊಚ್ಚಪೊಸತಮ್ಮ |
ಅವನಿಟ್ಟ ಗಂಟ ಬಿಡುವರು ಬೇಱಿಲ್ಲವಮ್ಮ ||
ಪಟ್ಟಪಗಲನಿರುಳೆನಿಪ ದಿಟ್ಟನಮ್ಮ | ಬಲು |
ಬೆಟ್ಟವ ಪೊಟ್ಟುಗಳೆವ ಬೀರನಮ್ಮ || ೨ ||

ಮಂಗಳಾಂಗವನು ತೋಱಿ ಮಱೆವನಮ್ಮ |
ಜಗದ ಕಂಗಳೊಡನೆ ಮನಸ ಕಳುವನಮ್ಮ ||
ಹೆಂಗೊಲೆಗಿನಿನಾಡರು ಹೇಸನಮ್ಮ | ( ಇನಿಸುಹೇಸನಮ್ಮ ) |
ಆಲಿಂಗಜನ ಹವಣಲ್ಲ ಅವಸ್ಥೆಯನಮ್ಮ || ೩ || —೨—

|| ರಾಗ — ಯರಕಲಕಾಂಬೋಧಿ ||

ಕಾಣಿರೆ ನೀವೆನ್ನನಿಯನನೆಲ್ಲರ ಕಣ್ಣ ಪುಣ್ಯದ ಬೆಳಸ | (ನಮ್ಮೆಲ್ಲರ ಕಣ್ಣ ಪುಣ್ಯದ ಬೆಳಸ) | ತಾಣತಾಣದೊಳು ತಡೆದು ತಡೆದು ನವಿಗಾಣಿಸಿ ಹರಣವ ಕೇಣಿ ಗೊಂಬವನ || ಪಲ್ಲವಿ ||

ಚರಣ|| ನೋಟದ ಸುಳುಹಿನೊಳೇ ಮುನ್ನಿನ ಮಾಟವ ಮಱೆಯಿಪನ ಪುರ್ಬಿ| ನಾಟದೊಳೆಲ್ಲರನಳವುಗಿಡಿಸಿ ಮಿಗೆ ಕೋಟಲೆಗೊಳಿಸುವ ಕೊಳಲುಗೋವಳನ || ೧

ಸಿರಿಮೊಗದೊಲವಿನೊಳೇ ನೋಳ್ಪರ ಕರಣವ ಕಲಕುವನ ಮೆ । ಯ್ಸಿರಿಯೊ
ಳಾನಂದದ ಸೆರೆಯನಲುಗಿ ಮಿಗೆ ಹರವಸಗೊಳಿಸುವ ಹರಿಯನೀಂಪಿಡೆಯ ॥ ೨ ॥

ಪೊಂಗೊಳಲುಲಿವಿನೊಳೇ ಲೋಕಕೆ ಮಂಗಳವೆಸಗುವನ, ತನ್ನಿಂಗಿ ।
ತಂಗಳೊಳಗೇಳ್ವೆಣ್ಗಳನುಱೆ ಗುಂಗುದಿಗೊಳಿಸುವ ಕೊನಬುಗೋವಳನ ॥ ೩

— ೩ —

॥ ರಾಗ — ಕಾಂಭೋಧಿ ॥

ಕಂಡಿರೇನೆ । ಕಂಡಿರೇನೆ । ಕಂಡಿರೆಯೆನ್ನಿನಿಯನ ಕಂಡಿರೇನೆ ।
ಕಂಡವರು ಮಾಜದಿರಿ ಕಾಲ್ಗೆಱಗುವೆನೆನ್ನ ಪುಂಡರೀಕಾಕ್ಷನು ಪೋದ
ಪೊಲಬ ತೋಱಿರೆ ॥ ಪಲ್ಲವಿ ॥

ಚ ॥ ಎಡಬಲಗಡೆಗೆ ಸಿಡಿವೆಳವೆಣ್ಣವಕ್ಕಿಯ ಪಡಿವ ।
ಬಡಿವಲೆಯ ಪೋಲ್ವ ಪೊಸಬಗೆಯ ನೋಟದ ॥
ಸುಡಿವ ಪೊಂಗೊಳಲ ಗತಿವಿಡಿದೆನ್ನೆ*ರ್ದೆಯಂ ತಾಡುವ ।
ಕಡುವೊರ್ವಿನ ಕೊಂಕುಗೂರಲ ಕೊನಬುಗಾಱನ ॥ ೧ ॥ — ೪ —

॥ ರಾಗ — ಕಾಂಭೋಧಿ ॥

ಏನೆಯಮ್ಮ ಏನೆಯಮ್ಮ । ಇದೇನಿಂತು ತವಪಿನ್ನೇತಕಮ್ಮ ॥ ಪ ॥

ಚ ॥ ಮುದ್ದುನಗೆಯ ಬಲೆಗೆ ಸಿಕ್ಕುಬಿದ್ದೆನಮ್ಮ । ಕೊಳಲ ।
ಸದ್ದುಗೇಳಿದಂದೆ ಬೆಲೆಗೆ ಸಂದೆನಮ್ಮ ॥
ಅದ್ದೆನು ವಿರಹಾಂಬುಧಿಯೊಳದ್ದೆನಮ್ಮ । ಅವನ ।
ಪೊದ್ದುಗೆಗೊಳಿಸಿ ಗೆಲವ ಪೊಣ್ಮಿಸಮ್ಮ ॥ ೧

ಬಣ್ಣವಗೆಯ ಬವಣಿಯೊಳು ಬಂದೆನಮ್ಮ । ಯೆನ್ನ ।
ಪೆಣ್ಣುಬುದ್ಧಿಯಿಂದ ನೊಂದು ಬೆಂದೆನಮ್ಮ ॥
ತಣ್ಣಡಿನೆಟಲಿಗಾಸೆದಳೆದೆನಮ್ಮ । ಕಾರು ।
ವಣ್ಣನೊಱಗದ ಸಿರಿಯನೊದವಿಸಮ್ಮ ॥ ೨

ವೇಣುವಿಡಿದ ಬಿಂಕಕೆ ಬೆಱೆತೆನಮ್ಮ । ಅವನ ।
ತಾಣಕದಂಡದೊಳುಱೆ ತಣಿದೆನಮ್ಮ ॥
ಕಾಣೆನಿನ್ನು ಬೇಱೆ ಗತಿಯ ಕಾಣೆನಮ್ಮ । ನೀನೆ ।
ಕಾಣಿಕೆಗೊಯ್ದವನಿಗೆನ್ನ ಕರುಣಿಸಮ್ಮ ॥ ೩ — ೫ —

॥ ರಾಗ — ಮುಖಾರಿ ॥

ಸಲ್ಲನೆಂದು ನಂಬಿದೆನಮ್ಮ । ಇಂತು ।
ಕಲ್ಲೆ*ರ್ದೆಯವನೆಂಬುದ । ಕಂಡು ಕಾಣದಾದೆನಮ್ಮ ॥ ಪ ॥

ಚ ॥ ಬಲುವಾವ ಪುಲ್ಸರವೆನಿಸುವನು ।
ಪಟ್ಟೆಪಗಲೆ ನೇಸಱನು ಮಱಸುವನು ।
ಬೀಸುವೆಲರ ಪಿಡಿದು ಕೆಡಪಿ ತ್ರೋಱಿಸುವನು । ಜಸರ ।
ತಲೆಯೊಳು ಬರೆದ ಬಿದಿಯು ತಬ್ಬಿಬ್ಬುಗೊಳಿಸುವನು ॥ ೧ ॥
ಏನೆನಿವನ ಮಹಿಮೆಗಳನೇಕ ।
ಜಗದೊಳಿಲ್ಲನಿವನಿಗೆ ಸರಿ ತೂಕ ।
ಇನ್ನೇನೇಱುವೆನಿವನದೊಂದು ದಾಕರುವನ ।
ಮೂವಣ್ಣದ ಮಾಯೆಯೊಳು ಮುಱುಗಿಹುದೀಲೋಕ ॥ ೨
ಜಗದ ಜಾಲಗಾಱರೊಳಿವನೇ ಮೇಲು ।
ಇನಿಸು ಸಡಿಲದಿವನಿಟ್ಟ ಕಾಲ ಕೀಲು ।
ಈಜಗವೆಲ್ಲಾಯಿವನೆಸಳೊಂದು ಪಾಲು । ಮೇಗೆ ।
ಬಗೆಬಗೆಯೊಳಿಹುದಿವನ ಸೊಗಸು ಮೂಱುಪಾಲು ॥ ೩ ॥ —೬—

॥ ರಾಗ—ಘಂಟಾರವ ॥

ಗೋಪಾಲನ ತೋಱೆ ಗೋಪಾಲನ ತೋಱೆ । ಗೋಪಾಲನ ತೋಱೆ
ಗೋಪಾಲನ ತೋಱೆ । ಈಪರಿಬಾವನ ಸೇವೆಯಿಲ್ಲದಿರಲಾಱೆ ॥ ಪಲ್ಲವಿ ॥
ಚ ॥ ಮುದ್ದುಮುದ್ದುಮೊಗದೊಳೆನ್ನ ಮೊಗವಿಟ್ಟು ಮುದ್ದಿಸು ।
ತಿದ್ದಲ್ಲದೀಬಱಯೊಡಲನಿನ್ನು ಪೊಱಲಾಱೆ ॥ ೧
ಪೊಗರೊಗುವ ಪಕ್ಕಿಸಣಿಯು ಪೋಲ್ವ ಸಿರಿಮೆಯ್ಯ ।
ಬಿಗಿಬಿಗಿದಪ್ಪದೀಯೊಡಲ ಬಿಟ್ಟೀಗಂಟ್ಯಗಾಱೆ ॥ ೨
ಚಿಕ್ಕದೇವೇಂದ್ರಗೊಲಿದ ಸಿರಿಗೋವಳನಡಿಗೆ ।
ಪಕ್ಕದೀಯೊಡಲ ಸೆಱೆಯು ಸಿಕ್ಕುಗೊಡಕಿಗಾಱೆ ॥ ೩ —೭—

ಎರಡನೆ ಸಪ್ತಪದಿ ಸಂಪೂರ್ಣಂ.



— ಸಪ್ತಪದಿ — IV

ಧಿಳ್ಳಿಯುಬಾಗಿಲೊಳ್ ಪರಿವ ಕೊಳ್ಳುಕೊಂಡಱೆ ಗೋಲಕೊಂಡೆಯುಮಂ ।
ಜಳ್ಳಿಸಿಯೊಕ್ಕಲಿಕ್ಕಿ ವಿಜಯಾಪುರಮಂ ಒಱಗೆಯ್ದ ಸೊರ್ಕಿನಿಂ ॥
ವಳ್ಳಿರಿವಾಶಿವಾಜಿಸುತ ಶಂಭುಜಿಯೋಗ್ರ ಯಸುಬುರ್ಣಕೊಬುರ್ಣವುಂ ।
ತೆಳ್ಳನೆಗೆಯ್ದು ಸಪ್ತಪದಾಕ್ರಮದಿಂ ಚಿಕದೇವಭೂವರಂ ॥ ೩೧

ಮಯನೋ ಶಂಬರನೋ ದಶಾಸ್ಯಸುತನೋ ಮಾರೀಚನೋ ಎಂಬಿನಂ ।
ಭಯದಿಂದಾಗದೆ ಧಿಕ್ಕೃಭಾಗವತಗರಪ್ರಾಂತಂಗಳೊಳ್ ಸಾಧುಗಳ್ ॥
ಜಯಜೀಯೆಂದಿದಿರಿಟ್ಟ ಕಷ್ಟದೊದವಿಂ ಪೊಕ್ಕೀಯು ಬಂದಾಪಿನಾ ।
ಜಯ ಸೊರ್ಕಂ ಮುರಿದಿಕ್ಕಿಯುಪ್ರತಿಮವೀರಾಭಿಖ್ಯೆಯಂ ತಾಳ್ದಿದಂ ॥ ೩೨

ವಚನ ॥ ಈ ನಾಲ್ಕನೆಯ ಸಪ್ತಪದಿಯೊಳ್ ವಿರಹಿಣಿಯರ ವಿರಹೋದ್ರೇಕಮಂ ಶ್ರೀಕೃಷ್ಣನೊಳ್ ಬಿನ್ನವಿಸ ದೂತಿಯರ ವಚನವ್ಯಾಜದಿಂ ಶ್ರೀಕೃಷ್ಣನ ಗುಣಾತಿಶಯಮುಮಂ ಪ್ರಕಟಿಸುವರ್.

॥ ರಾಗ—ಯರಕಲಕಾಂಬೋಧಿ ॥

ಕಂದ॥ ಕಡುಗೂರ್ತು ಕಣ್ಮ್ರಸಂ ಸೋಂ ।
ಲೊತ್ತಡಗೂಡುವ ಸ್ವೈಪನಿರ್ದಯೊಳಾಳೋಚಿಸುತುಂ ॥
ಕಡೆಗಾಣದಲಸುವಿಸಿಯಳ್ ।
ಮಿಡುಕಂ ಗೋವಿಂದನೊಡನೆ ದೂದವಿ ಪೇಟ್ಬಳ್ ॥ ೩೪

॥ ತಾಳ - ಝಂಪೆ ॥

ದೇವರೊಲವನು ಪಡೆದ ಲಾವಣಿಗೆಗೊಂಬಳು ।
ಈವಿಧದಿ ನೀನವಳನೆಣಿಸದಿರುವರೆ ಕೃಷ್ಣ ॥ ಪಲ್ಲವಿ ॥

ಚ ॥ ಪಿಡಿದ ಬೆಳ್ಳಿಲೆಪಡಿಪು ಪಿಡಿದಂತೆ ಕಂಡುತಿದೆ ।
ಅಡಸಿದೊಳ್ಳಡಕೆಯುಗ್ಗಳಿಸದಿರಲು ॥
ಕುಡಿಪ್ರುವ್ವ ಪಲತೆಬಿದ ಕೊಂಕುಗೊಳಿಸುತ್ತೆ ಪಿ ।
ಲ್ಲೊಡಲ ಜಡಮುರಿದು ನಿಟ್ಟುಸಿರುವಿಡುತಲಸುವಳು ॥ ೧

ಬಳಸಿ ನುಡಿವರ ಮಾತು ಬಯಲೊಳಗೆ ತಿರುಗುತಿದೆ ।
ಸುಖಿವೃಗಾಣದೆ ದಿಟ್ಟೆ ಸೋಜಿಗುತಿದೆ ।
ತೊಳಪ ಗಲ್ಲದೊಳು ಕೈದಳವನಮರಿಸಿ ತುಂಬಿ ।
ತುಳುಕಿ ಸುರಿವಾಲಿನೀರ್ದೊಣೆಯು ಕರೆಗಣ್ಮಿಪಳು ॥ ೨

ಮಲಗಲೆಳಸುವಳೊಡನೆ ಮಲಗನೊದೆದೇಳುವಳು ।
ನಿಲಲೆಳಸಿ ಕುಳ್ಳಿರುವಳಲೆವಡುವಳು ॥
ಅಲುಗಡದವೆಯು ವಿಚಿತ್ರದಂದವನು ಸೆಜೆಗೊಂಡು ।
ತಲೆದೂಗಿ ತನ್ನೊಳಗೆ ತಾನೆ ಕಳವಳಿಸುವಳು ॥ ೩

—೧—

॥ ರಾಗ—ಕಾಂಬೋಧಿ ॥

ಕಂದ॥ ನಲ್ಲಳ ಸೋಲಮನಾಲಿಸಿ ।
ಚೆಲ್ಲಾಡುವ ಪರಿಯ ಮನದ ಹಮ್ಮಿಳಿದು ಕರಂ ॥

ತಲ್ಲಳಮುಣ್ಮುವ ತೆಱದಿಂ |
ಸೊಲ್ಲಿಸಿದಳ್ ಮಾತಿ ವಿರಹತಾಪೋನ್ನತಿಯಂ || ೩೫

ಚಿನ್ನ ನಿಸಲೆನ್ನ ಹವಣಲ್ಲ । ಅ। ಚೆನ್ನಿಯೊಳು ಗೋಪಾಲ ಚೆಲ್ಲಾಟ ಸಲ್ಲ ॥ಪ॥

ಚ॥ ಒಲುಮೆಗಾತಿಯರು ನಾಡೊಳು ಪಲರುಮಿರೆ ಮುಳಿಯವಳೊಲುಮೆ ನಾಡಾಡಿಯಲ್ಲ । ಪಲವಗೆಯೊಳೇನದನು ಬಣ್ಣಿಪುದು ಕೇಳವಳು ಪಡುವ ಪಾಡುಗಳ ಬಗೆ ಬೇಱೆ । ಅ। ನೆಲೆಯ ನಿರವಿಸಿ ತಿಳುಹಲಾಱೆ । ತಡೆದು । ನಿಲಲಾಱಳವಳು ಇನ್ನರೆಗಳಿಗೆ ವಿಜಾಱೆ ॥೧

ಎಸಳುಗಂಗಳ ನೀರ್ಗಳೆವಿಡದೆ ಪೊಸಲಿಡುವ್ವೆಸೆವೆ ಪರಿಕಾಲ್ಗಳಂತು। ಬಿಸುಸುಯ್ವ ಬಿಱುಬಿನೊಳು ಬೇವಸಂಬಡೆವೃದನು ಚಿತ್ರಿಸಿ ಬಗೆಗೊಳಿಪುದೆಂತು । ಅವಳನಿಸುವ ಕಾವನ ಪಂತ ಸಂತು। ಯಿಸಾ । ಪೊಸಪೇಟದೊಳು ಇವಳಿಗೇನೇನು ಬಂತು ॥೨

ಪೇೞುವಡೆ ನಾಲಗೆಗೆ ಬಿಸುಪೇಱುವ್ವುದು ಕೇಳಿ ಬೇಗೆಗೊಂಬುವ್ವು ಕಿವಿಗಳು। ತಾಳುವಳದೆಂತೊ ಅತರುಣಿಯು ಕಟಕಟ ಪರಿತಾಪದೇೞಿಗೆಯನೇನೆಂಬೆ। ಅಬಾಲೆ ಕಡುಗಾವಿಡಿದ ಬೊಂಬೆ। ಯೇ। ಪೇೞುವೆನು ಬೇಸಗೆಯ ಬಿಸಿಲ ಪೂದೊಂಬೆ ॥೩

॥ ರಾಗ—ಕನ್ನಡಗೌಳ ॥ †

ಕಂದ। ಕಾವಳೆಯಗೆಲ್ದ ಗಾಜಿನ
ಠಾವಂ ಮೆಟ್ಟುವುದು ನಿನ್ನ ಸುತಿಯೊಡಲಿನುಪ್ಪು ॥
ನ್ಯಾವಸಿಕಾರಂಗಳಿನಾ
ದಾವಿ ಗೋವಳನ ಕಿವಿಗೆ ನವಿನೋಱುಸಿದಳ್ ॥ ೩೬

ನಿನ್ನವಳ ಪೆಟ್ಲೆರ್ದೆಯ* ನೆಱೆಯ ನೀನೆ ಬಲ್ಲೆ।
ಚೆನ್ನಗೋವಳರಾಯ ಚಿಂತೆಗಳವಡದೆಮಗೆ ॥ ಪಲ್ಲವಿ ॥

ಚ॥ ಮರುಳುಗೊಂಡಂತಿಹಳು ಮಱವಟ್ಟು ಮೊಯ್ಮಱೆದು।
ಕರಕರೆಯೊಳೊಂದುವಳು ಕಾತರಿಸಳು।
ಪರಿಪರಿಯ ನೆನಹುಗಳ ಪಸರಗೊಂಬಳು ಸುಯ್ದು।
ಬಸವಳಿದು ಬಾಯ್ಬಿಟ್ಟು ಪಲವ ಪಂಬಲಿಸುವಳು ॥೧
ಎಡೆವಿಡದೆ ಜಾನಿಸುವಳಿದೆ ಬಂದನೆರೆಯನೆಂ।
ದೊಡನೆದ್ದು ಮುಂಬರಿವಳೋಸರಿಸಳು ॥
ಮಡಮುರಿದು ನೋಡಿ ನೆಯ್ಮಱಿಸದಿರು ಮನದನ್ನ।
ತಡೆ ನಿಲ್ಲು ನಿಲ್ಲೆಂದು ತವಕದಿಂದೊದಗುವಳು ॥೨

---

† ನೀಲಾಂಬರಿ ಎಂದು ಒಂದು ಪ್ರತಿಯಲ್ಲಿದೆ.

ಬಯಲ ತಕ್ಕೈಸುವಳು ಬಾಯ್ಗೂಟಕೆಳಸುವಳು ।
ದಯೆಗೆಯ್ದು ಸಲಹೆಂದು ತಲ್ಲಣಿಪಳು ।
ನಯಸರವ ತೋಱುವಳು ನಲವೇಱಿಯಾನಂದ ।
ಮಱುವೆನಿಸುವಳು ನಿನ್ನ ಮಾಯೆಯೆಂತುಟೊ ಕೃಷ್ಣ ॥ ೩ —೩—

॥ ರಾಗ—ಕಾಂಬೋಧಿ ॥

ಕಂದ॥ ಬಂದೊಂದುಂ ದಿವ್ಯಾಂಗವ ।
ಸೌಂದರ್ಯಂ ಬಗೆಗೆ ಬಂದು ಪರಿವಿಡಿಯಿಂದಂ ॥
ನಿಂದಿರೆ ತೊಳಲ್ವ ಕಾಮಿನಿ ।
ಯಂದಮನಿಂತಚ್ಯುತಂಗೆ ಸಖಿ ಸೊಲ್ಲಿಸಿದಳ್ ॥ ೩೨

ಕಳವಳಿಪಳಿಂತೆಮ್ಮ ಕಣ್ಗಿಡಿಪಳು ।
ಕೊಳಲ ಗೋವಳ ನಿನ್ನ ಗುಣಗಳನೆ ಗುಣಿಸುವಳು ॥ ಪಲ್ಲವಿ ॥

ಚ ॥ ಒಲೆವ ಸಿರಿಮೊಗದೋಜೆಯುಚಿತಮೆಂದೊದರುವಳು ।
ಸಲಿನಲಿವ ಪೂರ್ಣೆಂದು ಸೈಗರೆವಳು ।
ಅಲೆವಡುವ ನೋಟದೊಂದಂದಮೆಂದಱಲುವಳು ।
ಉಲಿವ ಪೊಂಗೊಳಲ ಮೆಲ್ಲುಲಿಯೆಂದು ಗಳಪುವಳು ॥ ೧

ಪಲತೆಱದಿ ತೊಸೆವ ಕಿವಿವಚ್ಚಮೆಂದೊರಲುವಳು ।
ಕಳಿಪೆತ್ತ ಕದಪೆಂದು ಕನವರಿಪಳು ॥
ಸಲವೀವ ಚಕ್ರೆದುನ್ನತಿಯೆಂದು ನಮಿಸುವಳು ।
ಒಲಮುರಿಯ ಸಂಕೆಂದು ಬಸವಱಿದು ಪಲುಬುವಳು ॥ ೨

ಮುರಿವಡೆದ ಭುಜದ ಕಡುಮುದ್ದೆಂದು ಮೊಳಗುವಳು ।
ತಿರುಹಿದೊಳ್ಳಡುಪೆಂದು ದೆಸೆಗಿಡುವಳು ।
ಬೆರಲೂಱು ನಿಂದಡಿಯು ಬಿಡಗೆಂದು ಬೆಚ್ಚುವಳು ।
ಸರಿಸದೊಳ್ಳಡಿಯೆಂದು ಸಂತಸದೊಳೆಱಗುವಳು ॥ ೩ —೪—

॥ ರಾಗ—ಘಂಟಾರವ ॥

ಕಂದ॥ ಓರಂತುಱಿ ಮಸಗುವ ವಿರ ।
ಹಾರಭಟೆಗೆ ಹಮುಗಿ ಹರಣವಱಿವಂ ನೆಲೆಗೆ ॥
ಯ್ಯಾರಮಣಿ ನುಡಿದ ನುಡಿಗಳ ।
ದಾರಿಯನಿಂತೆಂದು ಹರಿಗೆ ಸಖಿ ಸೊಲ್ಲಿಸಿದಳ್ ॥ ೩೮

ಚೆನ್ನೆಯಾಡುವಳಿದನು ಚಿತ್ತವಿಪುದು ।
ಇನ್ನವಳ ಮನದಿರವನೆಂತು ಬಿತ್ತರಿಸುವೆನು ॥ ಪಲ್ಲವಿ ॥

ಚ ॥ ಗಿಳಿವಱಿಗೆ ನೀನೆ ಪಾಲ್ಗಿನೆಯೂಡಿ ಬಳಯಿಸೆಂ ।
ದೆಳೆಯಂಚೆ ನಿನ್ನ ಕೆಯ್ಯೆಡೆಯಿದೆಂದು ।
ಕಳವಳಿಸಿ ಕಾತರಿಸಿ ಗಾಱುಗೆಡಲೇಕಿನ್ನು ।
ಕೆಳದಿಯೆಚ್ಚಱದೊಳಿರು ಕೆಲಕೆ ತೊಲಗದಿರೆಂದು ॥ ೧
ಭಾವಚಿತ್ರದ ಪಟವ ಭಕ್ತಿಯೊಳೆ ಪೂಜಿಸೆಂ ।
ದೇವಕುಳಸರವಿನಿಯಗೀವುದೆಂದು ॥
ಈವಿಧದಿ ಮರುಳೆ ನೀನೇಕೆ ಮಱುಗುವೆ ನಾಕು ।
ಈವೇಳೆಗೇನು ಹಿತವೆಂದು ತಿಳಿದೆನಗೆಂದು ॥ ೨
ಅವನ ಪೆಸರಕ್ಕರವನನುಗೊಳಿಸು ಕಿವಿಯೊಳೆಂ ।
ದವನ ಪಾವುಗೆಯ ಮುಡಿಗಮರಿಸೆಂದು ॥
ಅವಿವೇಕಿ ಒಱಿವೆ ನೀನಱಿತೇಕೆ ನಾಕಿನ್ನು ।
ಎವೆಯುಲುಗದಂತೆ ಕೂರ್ತೆನ್ನ ನೋಡುತಿರೆಂದು ॥ ೩ —೫—

॥ ರಾಗ—ಘಂಟಾರವ ॥

ಕಂದ॥ ಅಱುನಱತುಸಿರ್ದೆಯಪಾಟಂ ।
ಒಱತೊಱಗಿದ ಬಾಳೆಯಿರವನಾರಯ್ದು ಕರಂ ॥
ಮಱುಗುವ ಕೆಳದಿಯರೆಸಕಮಂ ।
ನಱುಪಿದಳಾಪೊತ್ತಿ ತನಕದಿಂ ಗೋಪಳನೊಳ್ ॥ ೩೯

ಪನಿದೆತ್ತಣ ಜಿನಪವೇೞು ನಡೆನಡೆ ಬೇಗ ।
ಮಾನಿನಿಯು ನಿನಗೆನ್ನ ಮನಸು ಚಂಚಲಿಸುತಿದೆ ॥ ಪಲ್ಲವಿ ॥

ಚ ॥ ಬಾವನ್ನದಸ್ವೆಲ್ಲಿ ಪನ್ನೀರ್ಗಳೆಲ್ಲಿ ಪೂಸ ।
ದಾವರೆಗಳೆಲ್ಲೆಂದು ತವಕದಿಂದ ।
ಗಾವಳಿಸಿ ಕೆಳದಿಯರು ಕಳವಳಿಸುತಿರೆ ಕಂಡು ।
ದೇವರಡಿಯೆಡೆಗೆ ಕಡುದೀವರದೊಳೆಯ್ದಿದೆನು ॥ ೧
ಅಸಿಯೊಡಲ ಬಿಸುಪ ತಿಳಿಯೊಸರ್ವ ಕಣ್ಣೀರ ನೋ ।
ಡುಸಿರನಾರಯ್ಯೆನುತ್ತ್ರೋಜೆಗುಂದಿ ।
ಬಸವಱಿದು ಕೆಳದಿಯರು ಪಂಬಲಿಸುತಿರೆ ಕಂಡು ।
ಉಸಿರಲೆಂದೀಯೆಡೆಗೆಯುಱುಬಿನಿಂದೆಯ್ದಿದೆನು ॥ ೨
ಪಂತ ಸಂದುಪೆ ಮದನ ಪಾಡು ತಿರುಗಿತೆ ಚಂದ್ರ ।
ಸಂತಸವೆ ಇಂಪಿಗೆ ವಸಂತನೆಂದು ॥
ತಿಂತಿಣಿಸಿ ಕೆಳದಿಯುರು ದಿಗಿಲುವಡುತಿರೆ ಕಂಡು ।
ಸಂತಾಪದಿಂ ನಿನ್ನ ಸನ್ನಿಧಿಯನೆಯ್ದಿದೆನು ॥ ೩ —೬—

॥ ರಾಗ—ಮೋಹನ ॥

ಕಂದ॥ ದಾದಿಯರುಂ ಕೆಳದಿಯರುಂ ।
ಮೂದವಿಯರುಮಿನಿಯರುಳುಹಿನೊಳ್ ಕೆಯ್ದುಗೆವಂ ॥
ತಾಮುಮ ನೀಂನಿನ್ನೊರ್ವನೆ ।
ಕಾಮುಱಿಪ್ಪುವೆಂದು ಕೇವಿ ಗೌರಿಯೊಳುಸಿ*ರ್ದಳ್ ॥ ೩೦

ನಲ್ಲಳಿಗೆ ನಲವಿಂದಿಗೆ । ಅ । ಲ್ಲಲ್ಲಿ ವಿರಹಾಯಾಸ ಹರಿವಡೆಯಲಿಂತು ॥ ಪ ॥

ಚ ॥ ಬಳಸಿರುವ ಬಾಂಧವರ ಬಳಗದೊಳು ಬಸವಳಿಕೆ ।
ತಳಿರುವಾಸಿನೊಳು ಪರಿತಾಪದೊಂದೆಸಕ ।
ಬಳುಗೆಳದಿಯರೊಳು ಬಿಡದೊಗುವ ಕಣ್ಣೀರ್ವೊನಲು ।
ತಿಳಿದು ನಿರವಿಸುವರೊಳು ದಿಗಿಲು ನೆಲೆವಡೆಯೆ ॥ ೧

ನೆರೆದು ನಿಟ್ಟಿಸುವರೊಳು ನಿಟ್ಟುಸಿರ ಕಾಲಾಟ ।
ನೆರೆಹೊರೆಯ ಪೆಣ್ಗಳೊಳು ನಿಟ್ಟೆ*ಲಿರ್ದಗಿಟ್ಟು ।
ಕೊರೆವ ದಾದಿಯರೊಳುಱೆ ಕೊರ್ಕ್ಕೆ ಬಹು ಮೊಕ್ಕುಱೆವು ॥
ಪರಿಜನದ ನೆರವಿಯೊಳು ಬವಣೆ ಜೀರ್ವರಿಯೆ ॥ ೨

ಎನ್ನ ಮಂದಿಗರೆಡೆಯೊಳೀವಗೆಯ ಪಂಬಲಿಕೆ ।
ಮನ್ನಣೆಯ ಸಖಿಯರೊಳು ಮರುಕದೊಂದುಱುಬು ॥
ಚೆನ್ನ ಚಿಕದೇವರಾಜೇಂದ್ರವಲ್ಲಭ ಕೃಷ್ಣ ।
ನಿನ್ನ ಕೆಯ್ಯೊಳು ಶರಣ ನೆಲೆವಡೆಯಲಿಂತು ॥ ೩ — ೭ —

ವಿರಹೋದ್ರೇಕ ಸಪ್ತಪದಿ ಸಂಪೂರ್ಣಂ.



— ಸಪ್ತಪದಿ — V

॥ ರಾಗ – ಕಾಂಬೋಧಿ ॥

ಕಡೆಗಣ್ಣೊಳ್ ಸಿರಿ ಸಿಕ್ಕೆ ತೋರ್ಕೆಗಿಱಿಯಂತಂಗೆಯ್ಯೊಳಾಟಕ್ರಮಂ ।
ಕಡುಸೊಂಪಿಂ ಚಿಕದೇವ ಕಂಬುಕೊರಳೊಳ್ ಬಿಲ್ ಪುರ್ಬಿನೊಳ್ ತೋ
ರ್ಕೆಯಿಂ ॥ ಪಡೆಗಾಕಾರಮುಮುಕ್ಕೆ ಮಾಮುಷಮುಮುನ್ನಂತೆಂತು ನೀಂ
ಮಾಂಜೆಯುಂ । ನುಡಿಗುಂ ಸತ್ಯಪರಾಕ್ರಮತ್ವದೆ ಪೊದಱ್ದ ವಿಷ್ಣುವೆಂದೇ
ಜಗಂ ॥ ೪೧

ಆಡುವ ಪಾಂಸುಕೇಳಿಯೊಳ್ ಸಲ್ವ ತೊವಲ್ನುಡಿಯುಂ ತೊವಳ್ದು ಪಾ |
ತಾಡುವ ಪಾಂಗಿನಂತೆಸೆವ ಚೀರವುಮೊಂದುಗೆನೊಂದು ನಾಡೆಯುಂ ||
ರೂಡಿಸಿ ಸದ್ಗುಣಂಗಳನಿತುಳ್ಳೊಡವಿಾಜಿಕದೇಪರಾಯನೊಳ್ |
ನಾಡುಗರಾಡುವಂದು ಬಿರುದಾದುವು ಸತ್ಯಪರಾಕ್ರಮಾಪ್ತಿಯುಂ || ೪೦

ವಚನ || ಈಬಗೆಯ ಸಸ್ತ್ರಪದಿಯೊಳ್ ಅನ್ಯಾಸಕ್ತನಾಗಿರ್ದು ಬಂದ ಶ್ರೀಕೃಷ್ಣನಂ ಕಂಡು ಪ್ರಣಯಕೋಪದಿಂ ನುಡಿವ ಗೋಪಸ್ತ್ರೀಯರ ವಚನವ ನೆನೆದಿಂದವನ ಗುಣಂಗಳಂ ಪೊಗಳ್ದರ್.

ರಾಗ || ಕೇತಾರಗೌಳ ||

ಶ್ರೀಲಾಸ್ಯವಿಲಾಸಪರೌಪಸಕಲೋಪಾರಂ ವಿನೋದಕ್ರಿಯಾ |
ಲೋಲಂ ಗೋಪಜಗನ್ಮೊಹನಸುಮನಾಸಂದಪಂದೋವಿ ತ ||
ತ್ಕಾಲೋಕ್ತಕೃತ್ಯಕಾರ್ಯಗ್ರದನಪ್ಪುದಾವಿಪಂ ತಾಳ್ದು ಗೋ |
ಪಾಲಂ ಕಾತೊರ್ನಲಪಿಂ ಕಲಾಪತಿಯು ರಂಭಾ ರಾದಸಂ ಪ್ರೊಸ್ದಂ || ೪೨

|| ಅಷ್ಟಿತಾಳ ||

ಕಂದ || ಗೋಪಾಲನ ಪ್ರಾಣಗುಣಾ |
ರೂಪದೊಳಾವ್ರಾಜಪರಾಧದೊಳೆಜೆಗಳಂ ಕಂ ||
ತೋಸ್ಪ್ ಕೋಪಂ ಕೊನರಿತೆ
ಯಿಾಪರಿಯಿಂ ಕೊಂಕುನುಡಿಗಳಂ ಕೊನರಿಸಿದಳ್ || ೪೩

ಕೊನೆಸಾಗದಿಲ್ಲಿಗೀವರಾಯು । ಗೋಪಾಲರಾಯು || ಪಲ್ಲವಿ ||
ಚ || ಅನುವ ಪೇಳುವವೋಲಿನ್ನನುಬಿಲಿಸದಿರು ನಿನ್ನ ।
ಮನಗಳಗಿಸಿ ಮಿಗೆ ಮುಟ್ಟಿಸಳಿಪೆಗೆ ನವೆ || ೧
ಹನಸವಾತಿಗೆ ನಾನು ಹರವನಗೊಂಡಿಳಲ್ಲಿ ।
ಬನ್ನಸಗೆಯ್ದು ಒಲುಮೆ ಬಣ್ಣಿಗೆವಡಿಸದಿರು || ೨
ಮುಚ್ಚುಮುಚುಮೆ ನಾನಿನ್ನ ಮೊಗಕೆ ಸೋಂತವಳಲ್ಲ ।
ಇಚ್ಛಕವಾಡದಿರಡಿಗೆಬಿಗುವೆ ಚಿತ್ತವಿಸು || ೩ || —೧—

|| ರಾಗ—ಹುಶಾನಿ ||

ಕಂದ || ನಗೆಮೊಗ ಸವಿನುಡಿ ಸಿರಿಮೆ |
ಯ್ಸೊಗಸುಗಳಂ ಮೋಸಗೊಳಿಪ ಗೋಪಾಲನ ಪು ||

ಯ್ವಾಗೆಯುಂ ಬಯಲಿಸಿಸುತಿ ಪಡಿ |
ವೊಗದೊಳ್ ಮೂವಲೆಯ ಮುಂಮುಗೆಯ್ದುಳ್ ಮತ್ತಂ || ೨೫

ನೀತವೆ । ಇದು ನೀತವೆ । ನಿನ್ನ ನಡೆ ಬೇಱೆ ನುಡಿ ಬೇಱೆ ನೆನಹು ಬೇಱೆಲೆ ಕೃಷ್ಣ ॥ ಪಲ್ಲವಿ ॥

ಚ ॥ ಮೊಗಸಿರಿಯು ನಿಟ್ಟಿಸೆ ಮುದ್ದುಮುದ್ದಾಗಿದೆ ।
ಬಗೆಯು ಭಾವಿಸಲಿಂತು ಪಾಸಱೆಗಲ್ಲಿನಿಸಿದೆ ॥ ೧ ॥

ಸವಿಮಾತುಗಳ ಕೇಳೆ ಸ್ವರ್ಗನಿಸುತಲಿದೆ ।
ಕವಕೋಡುಗಳ ನೋಡೆ ಕತ್ತಲೆ ಕವಿಯುತಿದೆ ॥ ೨ ॥

ರೂಪುರೇಖೆಗಳ ನೋಡೆ ರೋಮಾಂಚವಾಗುತಲಿದೆ ।
ಗೋಪಾಲ ನಿನ್ನೊಲವೆನ್ನ ಕೋಟಲೆಗೊಳಿಸುತಿದೆ ॥ ೩ ॥ —೨—

ರಾಗ ॥ ಕಾಂಬೋಧಿ ॥

ಕಂದ ॥ ನೆನಪುಂ ನುಡಿಯುಂ ನಡತೆಯುಂ
ವಸಿತಸಿತುಂ ಬೇಱಬೇಱ ಪಲ್ಲಟಿಸಿರಾಗ ।
ಪಿನವಸಾಗೋಪಳರೀಱಿಯುನ ।
ಮೊನೆಮಾತಿನೊಳಿಂತು ಜಱಿದು ನುಡಿದಳ್ ಮತ್ತಂ । ೨೬

ನುಡಿವ ನೂತನ ಬೇಱೆ ನಡೆವ ನಟನೆ ಬೇಱೆ ।
ಬಿಡದೆ ಮನದೊಳಿಹ ಬಿನ್ನಣ ಬೇಱೆ ।
ನಡೆ ನಡೆ ನಡೆ ನಿನ್ನ ನಾಲಗೆಗಾನುತ್ತರ ।
ಗುಡಲಾಱೆನು ದಮ್ಮಯ್ಯ ಗೋಪಾಲರಾಯ ॥ ೧ ॥

ಬೇಟವೊರ್ವಳಲ್ಲಿ ಪುರ್ಬಿನಾಟವೊರ್ವಳಲ್ಲಿ । ನನ್ನೆ ।
ನೋಟವೊರ್ವಳಲ್ಲಿ ಒಱಬೂಟಕವಿಲ್ಲಿ ।
ತಾಟೊಟುತಗರುಬೊಗರುಟಕ್ಕುಟೌಳಿಯೊಸಗುವ ।
ಕೋಟಲೆ ಸಾಕು ದಮ್ಮಯ್ಯ ಗೋಪಾಲರಾಯ ॥ ೨ ॥

ಅಪರಿಮಿತಮಹಿಮ ಅಖಿಲಾಂತರಾತ್ಮ ನಿನ್ನ ।
ಕಪಟನಾಟಕದೊಳು ಕಡೆಗಾಣ್ಬರಾರು ।
ಅಪಚಾರ ಬರ್ಪುದಿನ್ನು ಅಂತಿಂದೆಂದು ನುಡಿದೊಡೆ ।
ಗುಪಿತದಿಂದಿರು ದಮ್ಮಯ್ಯ ಗೋಪಾಲರಾಯ ॥ ೩ ॥ —೩—

ರಾಗ ॥ ಖಾಜಿ ॥

ಕಂದ ॥ ಕೈತವದೊಳ್ ಕಡುಪ್ರೌಢನ ।
ಮಾತುಗಳಿಂದಾಕೆ ನಿಜಮೆನೆಂದುಸಿರ್ದ ಮುರಾ ॥
ರಾತಿಯ ನೀತಿಯ ರೀತಿಯ ।
ನೀತಿಜದೊಳ್ ಬಿಡದೆ ಬಿನ್ನವಿಸಿದಳ್ ವೃತ್ತಂ ॥ ೪೩

ಬಡವನೆ ನೀನು ಏನೇನೇನು ಬಡವನೆ ನೀನು ।
ಈಪುಸಿಗೊಡಬಡುವೆನೆ ನಾನು ॥ ಪಲ್ಲವಿ ॥

ಚ ॥ ಬಡವನೆನಿಸಿ ತೋರುವ ಬಲ್ಲಿದನಾಗಿ ನಿಂ ।
ದಡಿಯಲ್ಲಿ ಲೋಕವೆಲ್ಲವನಾಕ್ರಮಿಸುವೆ ॥ ೧ ॥
ಮುಗುದನೆ ನೀನು ಏನೇನೇನು ಮುಗುದನೆ ನೀನು ।
ಸಾಜವೆಂದು ಬಗೆವೆನೆ ನಾನು ॥ ಪಲ್ಲವಿ ॥

ಚ ॥ ಮುಗುದನೆನಿಸಿ ತೋರುವ ಮೋಸಗೊಳಿಸಿ ಮೂ ।
ಜಗವನಡಸಿ ನುಂಗಿ ಚೆಲ್ಲಾಟವಾಡುವೆ ॥ ೨ ॥
ಸುಲಭನೆ ನೀನು ಏನೇನೇನು ಸುಲಭನೆ ನೀನು ।
ಇದಕೆ ಮನವೊಲಿವೆನೆ ನಾನು ॥ ಪಲ್ಲವಿ ॥

ಚ ॥ ಸುಲಭನೆನಿಸಿ ತೋರುವ ಸೊಬಗುಗೋವಳನಾಗಿ ।
ಹಲವು ನಾರಿಗಳನು ಹರಷಿ ಮೆಯ್ಮತ್ತಿಸುವೆ ॥ ೩ ॥ —೪—

॥ ರಾಗ—ಕಾಂಬೋಧಿ ॥

ಕಂದ ॥ ಬತ್ತನೊಡನುಪಚಾರಂಗಳ್ ।
ನೊತರಿಸುತೊಳ್ವಾತನಾತುತೊಡಬಡಿಸುವ ಮೆ ॥
ಲ್ಲಡಿಗೆಣಗುವ ಗೋವಳನಂ ।
ನುಡಿದಳ್ ಮೆಲ್ಪಿಡಿದ ಕೊಂಕುನುಡಿಯೊಳ್ ವೃತ್ತಂ ॥ ೪೮

ಗುಟ್ಟನೊಡನಿರು ಗೋಪಾಲ । ಸಾಕುಸಾಕಿನ್ನು ( ಗುಟ್ಟನೊಡನಿರು ಗೋಪಾಲ ) ॥ ಪಲ್ಲವಿ ॥

ಚ ॥ ಒಂದು ಕಜ್ಜದಿಂದಲೆ ನೀನೊಂದೆಡೆಯೊಳಿರ್ದೆಯದ ।
ಱಿಂದ ಬಂದ ತಪ್ಪಾವುದೀಸಂದೇಹವೇಕೆ ಬಱಿದೆ ॥ ೧ ॥
ಆನು ನೀನೆಂಬ ಭೇದವನಱಿಯದಿರುವೆನ್ನೊಳು ।
ನೀನುಪಚರಿಪುದಿದು ನೀತನೆನಿಸಿ ತೋರದು ॥ ೨ ॥

ಏನೆನಿದೆತ್ತಣ ಪಾಪವೇತಕಡಿಗೆಱಗುವೆ ।
ಗೋವಳರರಸ ನಿನ್ನ ಕೂಡೆ ಪೋಱಲಱಿಯೆನು ॥ ೩ ॥ —೫—

ರಾಗ ॥ ಮುಖಾರಿ ॥

ಕಂದ ॥ ಮಿಱುಗುವ ಮೆಯ್ಸಿರಿಗಮರ್ದಾ* ।
ಕುಱುಪುಗಳಂ ನಾಂಜಿನಾಂಜಿ ನಾಯಿಗಳಿಂದಂ ॥
ಮಱಿಮಱಿಯಿಸ ಗೋಪಾಲಕ ।
ರೊಱೆಯನೊಳಂಗಸ್ಸನಾತನಸಿರ್ದಳ್ ಮತ್ತಂ ॥ ೪೯

ನಿನ್ನ ಮಿಱುವವಳೇ ನಾನು । ಗೋಪಾಲ ಕೇಳು ॥ ಪಲ್ಲವಿ ॥
ಚ ॥ ಮಾಜಲೇಕೆ । ಯೆನಗೆ ಮಱೆಮಾಜಲೇಕೆ ।
ಬಾಜಿಸೆ ಕೊಳಲು ತಾಕಿತೆ ಒಣ್ಣದುಟಿಯು ॥
ಓಜೆಯುಚಿತವಾಗಿದೆ । ಯೆನ್ನಾಣೆ ಕೇಳೋಜೆಯುಚಿತವಾಗಿದೆ ।
ಸೋಜಿಗಗೊಂಡು । ಸೊಕ್ಕದೆ ಸೊರಗದೆ ಸೊಲ್ಲಿಸೆನ್ನೊಡನೆ ॥ ೧ ॥
ಆಡಲೇಕೆ । ಯಿನಿತು ಪುಸಿಯಾಡಲೇಕೆ ।
ಬಾಡಿವೆ ಮೆಯ್ಸಿರಿ ಪಸುಗಳಟ್ಟಳಿಯೆ ॥
ತಡುಜೋಡಿಲ್ಲದಕೆ । ಯೆನ್ನಾಣೆ ಕೇಳೀಡುಜೋಡಿಲ್ಲದಕೆ ।
ಬೇಡನೀವಾಯು । ಬೆಚ್ಚದೆ ಬೆದಱದೆ ಪೇಱುಯೆನ್ನೊಡನೆ ॥ ೨ ॥
ಮಾಯುವೇಕೆ । ಯೆನ್ನೊಳು ಮಾಯುಮಾಯುವೇಕೆ ।
ಕಾಯುವೊಳೇನು ಕಾನನದ ಮಱಿದ್ರೊನೆಯೆ ॥
ಈಯಿರವಿಂಪಾಗಿದೆ । ಯೆನ್ನಾಣೆ ಕೇಳೀಯಿರವಿಂಪಾಗಿದೆ ।
ಆಯಿತಾಯಿತಂಜದೆಯುಳುಹದೆಯುಱುಹುಯೆನ್ನೊಡನೆ ॥ ೩ ॥ —೬—

ರಾಗ ॥ (ಇಂದು) ಘಂಟಾರವ ॥

ಕಂ ॥ ಮನವಿನಿಯನನುನಯೋಕ್ತಿಯೊ ।
ಳಿನಿಸಿನಿಸುಂ ಮುನಿಸು ತಣ್ಪುಗೊಂಡಿಱೆ ತರೆ ಮಾ ॥
ನಿನಿ ಬಗೆಗಱಗುತೆ ಗೋಪಾ ।
ಲನ ಪಲವುಂ ಜಾಣ್ಮೆವಲೆಗೆ ಸಿಲ್ಕಿದಳೊಲವಿಂ ॥ ೫೦

ಎನ್ನನೊಡಂಬಡಿಸಲೇಕೆ ನಿನ್ನವಳು ನಾ ॥ ಪಲ್ಲವಿ ॥
ಚ ॥ ಎನ್ನ ಮುನ್ನ ಭಾಗ್ಯಫಲವೆನ್ನ ಬೆನ್ನಬಿಡದಿರೆ ।
ನಿನ್ನೊಳು ತಪ್ಪೆಣಿಪುದು ನೀತವೆನಿಸಿರದು ॥ ೧ ॥

ಅಂದಿನ ಕಾಲದೊಳು ನಾವಂತು ಸಂತಸದೊಳಿರ್ದೆ ।
ಯಿಂದಿನ ಕಾಲದ ಗುಣವಿಂತು ಬಂದುದೆಮಗೆ ॥ ೨ ॥

ಚಿಕ್ಕದೇವೇಂದ್ರವರದ ಚೆನ್ನಿಗ ಗೋಪಾಲರಾಯ ।
ಯಿಕ್ಕ ಮಾತೇನು ನಿನ್ನ ಯಿಚ್ಛೆಯವಳಲ್ಲವೆಂದಿಗು ॥ ೩ ॥ —೭—

ಪ್ರಣಯಕಲಹ ಸಪ್ತಪದಿ ಸಂಪೂರ್ಣಂ.



## — ಸಪ್ತಪದಿ — VI

ಪಟ್ಟಿಡಿಗೊಳ್ಪಿಸಂ ಪಗೆವರೊಳ್ಕಲಸಂ ಮಿಗೆ ಕೊಂಡು ಕಂಮುಕಂ ।
ಗುಟ್ಟಿನ ಮುನ್ನೆ ಬಲ್ಲುಗೆಗಳಂ ತಳೆಗುಟ್ಟಿ ಸಮಂತು ಪಟ್ಟಿಯುಂ ॥
ಕಟ್ಟಿದ ಮುನ್ನಮೇ ಪರಿದು ಕಟ್ಟಿ ಕ್ರೋಪಟ್ಟಿರಿಮಾರ್ಗವರ್ಗಮಂ ।
ನೆಟ್ಟನೆ ಚಿಕ್ಕದೇವನೆಸೆದಂ ನಲಿ ಸತ್ಯಪರಾಕ್ರಮಾಂಕದಿಂ । ೨೧

ಗಂಡರಗಂಡನುಕಾರ್ನೆರಮುಕ್ಕೆ ಗಂಡಸಿಡಿಜಿನ್ ಕೈಮುಕ್ಕೆ ।
ಕೊಂಡರ ಗಂಡನಾಟಿಸುಡಿದಸ್ತ್ರದ ರಾಯರ ಗಂಡನಾಮತ್ರಿಂ ॥
ದ್ವಂಡರ ಗಂಡನೆಂಬ ಪಲವ್ರಂ ಬಿರುದುಂ ಚಿಕದೇವರಾಯನೊಳ್ ।
ಮಂಡಿತಮಾತ್ರಿ ನೆಗತ್ತಮೊಪಳೊಂದಿದ ಸತ್ಯಪರಾಕ್ರಮಾಂಕದಿಂ ॥ ೨೨

ವಚನ ॥ ಈ ಬಗೆಯ ಸಪ್ತಪದಿಯೊಳ್ ಶ್ರೀಕೃಷ್ಣನೊಳ್ ಬೆರಸಿ ಬಳವೆಣ್ಣಳ್ ತಂತಮ್ಮ ವೃತ್ತಾಂತಮಂ ಕೇಳಿಯರೊಳ್ ಪೇಳ್ದು ನುಡಿಗಳ್ ನೆಪದಿಂದವನ ಗುಣಂಗಳಂ ಸಿರವಿಸುವರ್.

ರಾಗ ॥ ಮುಖಾರಿ ॥

ಏಗೆಯ್ವೆನಮ್ಮ । ಏನಿದೆತ್ತಣ ಮಾಯವೆಂದರಿಯೆನೆ ।
ಏಗೆಯ್ವೆನಮ್ಮ । ನಾನೇಣಿಸಿ ಗುಣಿತುಗೆಯ್ವುದೆಲ್ಲಾ ನೀರೊಳು ಒರೆದಂತಾದುದಮ್ಮ ॥ ಪಲ್ಲವಿ ॥

ಚ॥ ಇಂದು ನಲ್ಲನಿಲ್ಲಿಗೆಯ್ದಿದೊಡೆನ್ನ ಕಣ್ಣಾಳೆಳಸಿದಂತೆ ।
ಅಂದಚಂದಗಳನಾರಯ್ದು ನೋಡುವೆನೆಂದಿರ್ದೆನಮ್ಮ ॥
ಬಂದೊಳುಮೊಗವ ತೋರಿದ ಮುನ್ನಮೆ ಮುಂಬೆ ನೆನೆದ ನೆನಹಿನೊಳ ।
ಗೊಂದಾದರು ತೋರಿದಾದುದು ಕೇಳಿನ್ನಿರದುದನೇನೆಂದುಸಿರುವೆನಮ್ಮ ॥೧॥

ಇಂದು ಸಲ್ಲನಾಡುವ ನುಡಿಯೊಳೊಂದನುಱಿಯದಾಲಿಸಿಯೞಿವೃ ।
ಗುಂದದದಕೆ ಬದಲುನುಡಿವೆನೆಂದಿರ್ದೆನಮ್ಮ ॥
ಬುದೊಳುದನಿಯು ತೋಱದ ಮುನ್ನಮೆ ಪಲವು ನೆನಹನೆಲ್ಲ ಮಱೆತು ।
ಬೆಂದ ನಾಲಗೆ ಮುದುಡುಗೊಂಡ ಬಗೆಯನಾನೆಂತು ಪೇೞುವೆನಮ್ಮ ॥ ೨ ॥

ಇಂದು ಚೆಲುವಗೋಪಾಲರಾಯನೆನ್ನೊಳೊಲಿದು ಲಾಲಿಸುವೆಸಕ ।
ಕೊಂದಕೊಂದ ಬದಲುಗೆಯ್ವೆನೆಂದಿರ್ದೆನಮ್ಮ ॥
ಬಂದು ಕೆಯ್ಯ ಪಿಡಿಯದ ಮುನ್ನವೆ ಬಲಿತ ಮನದ ಬಿಗುಹು ಸಡಿಲಿ ।
ಮುಂದುದೋಱದೆ ಮೋಸಗೊಳಿಪ ಮೋಹಕಿನ್ನಾರಿಗೆ ಮೊರೆಗೆಯ್ವೆನಮ್ಮ ॥

—೧—

॥ ರಾಗ— ಕಾಂಬೋಧಿ ॥

ಮೋಹವೀಪರಿಯೊಳೆನ್ನ ಮುಂದುಗೆಡಿಸುತ್ತಿದೆ ।
ಊಹದನನಱಿಯೆನಾನೆಲ್ಲರಂತಿರ್ದೆನಮ್ಮ ॥ ಪಲ್ಲವಿ ॥

ಚ ॥ ಬರವ ಕೇಳಿದೊಡನೆಯೆಂದಿನಿಂಪಿನೊಳಿರಲೀಸದು ।
ಭರದೊಳಿದಿರುಗೊಂಡು ಪಾದಪದ್ಮಕೆಱಗಲೀಸದು ॥
ಗರುವರೆಱೆಯನೊಕ್ತಿಗೆ ಸಾಜಗತಿಯೊಳೆಯ್ದಲೀಸದು ।
ಬಱಿದೆಯವನ ಬೞಿಯ ನಿಂದು ಸದುಳವಡೆಯಲೀಸದು ॥ ೧ ॥

ಎಱಕಗೊಂಬುದಲ್ಲದೆ ಮುಂದಣೆಸಕವೇಣಿಸಲೀಸದು ।
ಅಱಿಕೆಗೂಡಿಯೊಂದು ನುಡಿಯನವನೊಳಾಡಲೀಸದು ॥
ಅಱಿವುಮಱೆಯಲ್ಲದೇಣಿಸದಂತೆ ನಡೆಯಲೀಸದು ।
ಕುಱಿತು ಮುದ್ದುಮೊಗವ ನೋಡಿ ಕೞಿವುಗೊಳಿಸಲೀಸದು ॥ ೨ ॥

ಸುಗುಣನೆನಗುಪೆಸಕವನಿತು ಸೊಗಸುಪಡಿಸಲೀಸದು ।
ಬಗೆಯೊಳಿರ್ದಂತೆ ಕೊನಬುವಗೆಯು ಬಳಸಲೀಸದು ॥
ಬಿಗಿದ ತಕ್ಕೆ ಸಡಿಲಿ ಪೆಱತು ಬಿನದಗೆಯ್ಯಲೀಸದು ।
ಮೊಗದೊಳಿಟ್ಟ ಮೊಗವ ನೆಗಹಿ ಮುದ್ದುಮಾಡಲೀಸದು ॥ ೩ ॥ —೨—

॥ ರಾಗ—ಭೈರವಿ ॥

ಮನಸಿನ ದಾಹ ಬೇಱೆ । ಏಗೆಯ್ವೆನಮ್ಮ । ತನುವಿನ ದಾಹ ಬೇಱೆ ॥ ಪಲ್ಲವಿ ॥

ಚ ॥ ಅವನ ಬೞಿಗೆ ನುಱಿಯಲಮ್ಮದಳವುಗುಂದಿಯುಳುಕಿ ಬಳುಕಿ ।
ಬವಣಿಗೊಂಬ ಮೆಯ್ಯ ಸಜ್ಜುಬಡಿಸಿದೆನಮ್ಮ ॥
ಅವನ ಪಡಿಮೊಗದಿ ನಿಲ್ಲಲಮರಿತೆಂಬುದಲ್ಲದೆ ।
ಳವಲವಿಕೆಗೂಡಿಯುರ್ಜಿ ಲಳಿಮುಸಗದೆಂತುಗೆಯ್ವೆ ॥ ೧ ॥

ಮತ್ತೆಮತ್ತೆ ಬೆರಳ್ಗಳಿಂದ ಮಿಡಿಸಿ ತುಟಿಯ ಮುರುಕಗೊಳು ।
ತತ್ತಲಿತ್ತ ಜೋಲ್ವ ಮೊಗವನಿದಿರುಗೆಯ್ವೆನಮ್ಮ ॥
ಮುತ್ತನಿಡುವಲ್ಲಿ ಕಣ್ಣ ಮುಚ್ಚಿ ಮೋಹಗೊಂಬುದಲ್ಲದೆ ।
ಯೊತ್ತಿ ಮೊಗದೊಳಿಟ್ಟ ಮೊಗವನೊಂದುಪೆರಸದೆಂತುಗೆಯ್ವ ॥ ೨ ॥

ಬಿಡಿಸಿ ಬೆಚ್ಚಿ ಬಿಮುರುವಡೆದು ಹದುಗಿ ಹಮ್ಮೈಸುವ ಮೆಯ್ಯ ।
ಪದುಳಗೊಳಿಸಿಯೊಡಂಬಡಿಸಿದೆನಮ್ಮ ॥
ಸುದತಿ ಗೋಪಾಲನ ಮೆಯ್ಸೋಂಕಿತೆಂಬುದಲ್ಲದೆ ।
ಮದನಕದನದೆಸಕದಲ್ಲಿ ಮೆಯ್ವನಿರಿಸದೆಂತು ಗಯ್ವೆ ॥ ೩ ॥ —೩—

॥ ರಾಗ—ಕಲ್ಯಾಣಿ ॥ ✓

ಎಳಸಿದುದೆಲ್ಲನನೆಸಗುವ ಯುವತಿಯರೇಂ ಪುಣ್ಯವತಿಯರೊ । ಎಳಸಿದಂತೊಂದನು ಎಸಗಲೀಸದುಯೆಸ್ನ । ನೀಯೊಡಲಿಗೆನ್ನೊಳೇಂ ಕೇಣವಮ್ಮ ॥ ಪಲ್ಲವಿ ॥

ಚ ॥ ಪಾಸಿನೊಳಿರಲನುವಾದುದಲ್ಲದೆ ಮೆಯ್ಮರೆದು ।
ಪತ್ತಿಕುಳ್ಳಿರಲುಳಿದು ಪದುಗುವುದಮ್ಮ ॥
ಕೈಸೋಂಕಿಗಮುರಿದುಪಲ್ಲದೆಯುಗುಗೊರನೆ ।
ಗೆಯ್ಮೆಗಳುಕಿ ನಡನಡುಗುವುದಮ್ಮ ॥ ೧ ॥

ಸುಗಿದು ಮೇಲುದನೊಪ್ಪಗೊಂಡಿರ್ಪುದಲ್ಲದೆ ।
ಜಿಗಿದು ಪಿಡಿಯೆ ನಿಂಗೆ ಬೆಚ್ಚುವುದಮ್ಮ ॥
ಮೊಗದೊಳು ಮೊಗವಿಡೆ ಸ್ಯೆರಿಪುದಲ್ಲದೆ ।
ಮೊಸೆವಲ್ಲ ಗಾಸಿಗೆ ಮುರಿಗೊಂಬುದಮ್ಮ ॥ ೨ ॥

ಉಡೆನೂಲ ಸಡಿಲಿಸೆ ತಾಳ್ದುದಲ್ಲದೆ ನಿನು ।
ಪಿಡಿದೀಬ್ ಹರಣ ಹಮ್ಮೈಸುವುದಮ್ಮ ॥
ಒದಲು ಮುಸುತು ಮರವಟ್ಟದಲ್ಲದೆ ಮೇಲೆ ।
ನಡೆದ ನಡತೆಯೊಂದನರಿಯದಿಲ್ಲಮ್ಮ ॥ ೩ ॥ —೪—

॥ ರಾಗ—ಕುರಂಜಿ ॥

ಇನಿಯನ ಬಗೆಗಳನೆಣಿಸದ ಮುನ್ನ । ತನುಮನವೊಂದಾಗಿ ತಲ್ಲಣಿಸುತಿದೆ । ಮುನಿವುದೆತ್ತಣದಿನ್ನು ನೋಡಿಯೆತ್ತಣದು । ಮನವ ಬ್ಯೆತಿಟ್ಟು ಮಾರ್ಮಲೆವುದೆತ್ತಣದು । ಮೊಸೆದೋರ್ಪುದೆತ್ತಣದು । ಮೂದಲೆಯೆತ್ತಣದು । ತೊಸೆವುದೆತ್ತಣದಿನ್ನು ದೂರ್ಪುದೆತ್ತಣದು । ಅನುಮಾನವೆತ್ತಣದು । ಅಳವೆತ್ತಣದು । ಅನುವನಾರಯ್ವನೆಂಬಾಸೆಯೆತ್ತಣದು ॥ ಪಲ್ಲವಿ ॥

ಚ॥ ಇದೆ ಬಂದನರಸನೆಂಬೀನುಡಿಗೇಳೆ । ಬೆಡೆಬೇಟದೊಳು ಪೆಯ್ ಪೆಂಪುಗೊಂಡುರ್ಬಿ । ಸೊದೆಯುಂಡವೊಲು ಗಾಳಿ ಸೊಂಕಿದವೊಲು । ಬೆದರುವಡೆದವೊಲು ಬೆರ್ಚಿದವೊಲು । ಮದವೇಱಿದವೊಲು ಮರುಳಾದವೊಲು । ಹದನೞಿದವೊಲು ಹರವಸಗೊಂಡವೊಲು। ಮದನಮಂತ್ರಾವೇಶ ಮಾಡಲಿಟ್ಟವೊಲು ಮುದದ। ಮುನ್ನೀರೊಳು ಮುೞುಗಿ ತೇಲುತಿಪೆ ॥ ೧ ॥

ಒಱುಸುಡಿಯುಲಿಸ್ನ ಪ್ರಾಣವಲ್ಲಭನ। ಕಱುಕು ನೋಡದ ಮುನ್ನ ಕೋಱಗಿತ್ತೆನ್ನೊಡಲು। ಮಱತೊಱಗಿದವೊಲು ಮರವಟ್ಟವೊಲು । ಬೆಱಗುವಡೆದವೊಲು ಬೆಗಡುಗೊಂಡವೊಲು । ಅಱವುಗುಂದಿದವೊಲು ಅಳವಳಿದವೊಲು ತೆಱನೞಿಯುದವೊಲು ಪೆಸೆಗೆಟ್ಟವೊಲು । ಪರಿವಡಸಿದವೊಲು ಪಾಡೞಿದವೊಲು। ತೊಱೆದಸ್ಯಾಚಿಂತೆಯು ಸೊರ್ಕೇರ್ಱುತಿದೆ ॥ ೨ ॥

ಎಱೆಯ ಚಿಕ್ಕದೇವೇಂದ್ರನೆನ್ನ ಲಾಲಿಸಿದ ನೆರೆಸೊಗಸುಗೆನ್ನೆರ್ದೆವನೆಯೊಳು । ನೆಱೆಸಿಕ್ಕಿದವೊಲು ಚಿತ್ರಿಸಿದವೊಲು । ಕರುವಿಟ್ಟಿಱಿದವೊಲು ಕಾಸಿ ಬೆಸ್ಗೆವೊಲು । ಸರಿಗೊಂಡವೊಲು ಸರಗೊಳಿಸಿದವೊಲು । ಕೊಱೆದು ಕೋದವೊಲೊಂದುಗೂಡಿದವೊಲು । ನಿಱಿಗೆವಡೆದವೊಲು ನೆಲಸಿತೆಂಬವೊಲು । ತಱು ಸಂದಾನಂದದ ತನ್ಮಯವಾಗುತಿದೆ ॥ ೩ ॥ —೫೧—

॥ ರಾಗ — ಶಂಕರಾಭರಣ ॥

ಇದಿ ನಾ ಸೋಮುಸಲುಪುಮಿಂತಿ । ಎಗನೇಮುಂದುನೆ ಪದಿವೇಲೈ ನಾಸೇನೆಂಚಿನ ಪಂತಮಿದೇರದಮ್ಮ ॥ ಪಲ್ಲವಿ ॥

ಚ॥ ಅದನರೊವಾನಿ ಪೋಮು ಜೂಚಿನಂತಟನೆ।
ಯುದಟೊ ನೆಲಕೊಂನ ದಿಟವೆಂದೊಪ್ಪೋಯುನೆ॥
ಚದರಕಮುದಿಗಟ್ಟಿಜೇಶಿಟಂತಲೋನೆ।
ಮುದಮುನಕನುಗಾವ ಮುಂದುಗ ಪೋಸಬುಜ್ಜೆ ॥ ೧ ॥

ಪೆಲದಿ ವಾನಿ ಪಲುಕುವಿನೇಟಂತಲೋನೆ।
ಅಲುಕವೇಡಿಚೆಲ್ಲನಾರಿಪೋಯುನೆ ॥
ಚಲಮುವಿಡವಕ ಸಾದಿಂಚೆಟಂತಲೋನೆ।
ಮೊಲಕನವ್ವುಲುಮುಂನುಗಾ ಪೋಸಬುಜ್ಜೆ ॥ ೨ ॥

ಚಕ್ಕನಿಗೋಪಾಲುನಿಚೆಂತಜೇರೇಟಂತಲೋನೆ।
ಪೆಕ್ಕಸಮ್ಮೈನವಿಗುವೆಂದೊಪ್ಪೋಯುನೆ ॥
ಅಕ್ಕರದಾಚುಕಱರಮುರಶೇಯುಗ।
ಅಕ್ಕರೋನೀವಿವದಲಿಮುಪ್ಪುಡೆ ಪೋಸಬುಜ್ಜೆ ॥ ೩ ॥ —೬—

|| ರಾಗ—ಮೋಹನ ||

ಕೆಳದಿಯಿದೇನು ಮಾಯು । ಕೇಳಿನ್ನೇನುಪಾಯು । ಸಖಿಯಲೊಡನೆ ಗೋಪಾಲರಾಯು ಸೊಕ್ಕುಗೊಳಿಪುದೆನ್ನ ಕಾಯು ॥ ಪಲ್ಲವಿ ॥

ಚ ॥ ಮುರಿದೇಬ್ಬುದು ನವಿರು । ಮೊಳೆವುದೊಡನೆ ಬೆವರು ।
ತರಹರಿವುದೊಯ್ಯನುಸಿರು । ತಳೆವುದೆಬ್ಬಿಸುಂಬ ಪೆಸರು ॥ ೧
ಕದುಬುಗೊಂಬುದು ಕರಣ । ಕವಿವುದಂತಃಕರಣ ।
ಗದಗದಿಪುದು ಕರಚರಣ । ಕರಗಿ ಕಾತರಿಪುದು ಹರಣ ॥ ೨
ಬಳೆವುದೆರ್ದೆಯ ಗೆಲವು । ಬಲಿವುದೊಡನೆ ನಲವು ।
ಮುಳುಗಿ ತೇಲುತಿರ್ಪುದೊಲವು । ಮುಂದಣೆಸಕದೆಣಿಕೆ ಪಲವು ॥ ೩ —೭—

ರೂಪಕತಾಳ ಸಪ್ತಪದಿ ಸಂಪೂರ್ಣಂ.



## — ಸಪ್ತಪದಿ — VII.

ಜಾಱಿಸಿ ಜಾಡ್ಯಮಂ ಜಡಕಮುರ್ಗಮನೆಬ್ಬಿಸೆ ಬಲ್ಸುರಂಗದಿಂ ।
ಪಾಱಿದ ಕೋಂಟೆಯೊಳ್ಪರಿವಿರ್ಭಟರ್ಗಳರಿವಬ್ಜ ಜಾಂಡಮಂ ॥
ವಿಱಿಮು...ರಳಿಂಪು ದಿನದಿಂಪೊಡವಾಯ್ದು ವಿಮಾನವಾಹಕರ್ ।
ದೂಱಿದರಂದು ಸಿಂಪ ಜನಲೋಕದೊಳಪ್ರತಿಮಪ್ರತಾಪಮಂ ॥ ೫೩

*ಕೆಸರ್ವ ಕಸರ್ವದಿಂ ತಿಸುಳಿ ಮುಕ್ಪ್ರೋಜಳೆಂದು ಕಸಲ್ದು ಪಾಯ್ದಿಪಂ ॥
ಕವಡಿದ ಕಣ್ಗಳಿಂ ಕಡುಗಿ ಸಿಟ್ಟಿಸಿ ಜೆಟ್ಟಿಗಳೆಂದು ವಾಸವಂ ॥
ಸವೆವಿಸವೊಬ್ಬವಾಜಡಕಮುರ್ಗದ ಪಾಸಱಿಗಳ್ ಸುರಂಗದಿಂ ।
ಮುದದೊಡನಾಡುವಪ್ರತಿಮನೊಳ್ಜ ಸದಾತಿರಿಕಲ್ಗಳಂಬಿನಂ ॥ ೫೪

ವಚನ ॥ ಇಂತಾಱುಂ ಸಪ್ತಪದಿಗಳೊಳ್ ಶ್ರೀಕೃಷ್ಣನ ಬಾಲ್ಯಕೌಮಾರಲೀಲೆಗಳುಮಂ ಯೌವನಾರಂಭಲೀಲೆಗಳುಮಂ ಭಾವಿಸಿ, ಈಏೞನೆಯ ಸಪ್ತಪದಿಯೊಳ್ ಶ್ರೀಕೃಷ್ಣನ ಕಲ್ಯಾಣಗುಣಂಗಳನನುಭವಿಸಿ ರುಕ್ಮಿಣೀಸತ್ಯಭಾಮೆಯರ್ಗಂ ದಿವ್ಯಸೂರಿಗಳ್ಗಮಾಳ್ವಾರುಗಳ್ಗಮಾಚಾರ್ಯರ್ಗಂ ಮಂಗಳಾಶಾಸನಂಗೆಯ್ವರ್.

॥ ರಾಗ— ಇಂದು ಘಂಟಾರವ॥ ತಾಳ—ಝಂಪೆ॥

ಸೊಗಸುಗೋಪಾಲನಿಗೆ ಶುಭಮಂಗಳಂ ।
ಜಗದೇಕಮೋಹನಗೆ ಜಯಮಂಗಳಂ ॥ ಪ ॥

ಚ ॥ ಸಿರಿವೆತ್ತ ಮೆಲ್ಲಡಿಯ ಚೆಲ್ವಿಕೆಗೆ ಮಂಗಳಂ ।
ತೆರೆಮಸಗುವುಗುರ ಕಾಂತಿಗೆ ಮಂಗಳಂ ।
ಕರಮೆಸೆವ ಕಿಱುದೊಡೆಯ ಗಾಡಿಗಱೆ ಮಂಗಳಂ ।
ಸಿರಿಮಲಗುದೊಡೆವೊಗರ ಸೇರುವೆಗೆ ಮಂಗಳಂ ॥ ೧

ಪೊಸದೇಸೆಯಿಂದುಟ್ಟ ಪೊನ್ನುಡುಗೆ ಮಂಗಳಂ ।
ಬಿಸಜದಿಂದೆಸೆವ ನಾಭಿಗೆ ಮಂಗಳಂ ।
ಮಿಸುಪ ಕೆಂಬರಲಿಂದೆ ಮೆಱೆವೆರ್ದೆಗೆ ಮಂಗಳಂ ।
ಒಪೆದು ಧರಿಸಿದ ತುಳಸಿಯೊಳುಸರಕೆ ಮಂಗಳಂ ॥ ೨

ಚೆಲುವ ಪಱುಂಬಳೆಯ ಸಿಂಗರಕೆ ಮಂಗಳಂ ।
ಬಲಮುರಿಯ ಸಂಕದೊಪ್ಪಕೆ ಮಂಗಳಂ ।
ಉಲಿವ ಪೊಂಗೊಳಲ ಮೆಲ್ಲುಲಿಗಳಿಗೆ ಮಂಗಳಂ ।
ಸಲಿಸಲಿವ ಮಕರಕುಂಡಲಗಳಿಗೆ ಮಂಗಳಂ ॥ ೩

ಮುಗುಳುನಗೆ ಬಗೆಗೊಳುವ ಮೊಗಸಸಿಗೆ ಮಂಗಳಂ ।
ಪೊಗರುಗುವ ಕದಪಿನೋಜೆಗೆ ಮಂಗಳಂ ।
ಮಗಮಗಿಪಯುಸಿರ ಪರಿಮಳಕೆ ಮಿಗೆ ಮಂಗಳಂ ।
ಬಗಸೆಗಣ್ಗಳ ತಣ್ಪವಗೆಗಳಿಗೆ ಮಂಗಳಂ ॥ ೪

ಸಕಲಲೋಕವ ಪೊರೆವ ಸೈರಣೆಗೆ ಮಂಗಳಂ ।
ಅಕಳಂಕಗುಣಸಮೂಹಕೆ ಮಂಗಳಂ ।
ಚಿಕದೇವರಾಯನಿಗೆ ಚಿಂತಿತಾರ್ಥವನೀವ ।
ಸುಕರಗೋಪಾಲನಿಗೆ ಶೋಭನಂ ಮಂಗಳಂ ॥ ೫ —೧—

॥ ರಾಗ—ಶ್ರೀರಾಗ॥ ತಾಳ—ಝಂಪೆ॥

ಸುಗುಣೆ ರುಕ್ಮಿಣಿಗೆ ಮಿಗೆ ಶುಭಮಂಗಳಂ ।
ಜಗದೀಶನೆಱೆಯಳಿಗೆ ಜಯಮಂಗಳಂ ॥ ಪಲ್ಲವಿ ॥

ಚ॥ ಅಡಿಗೆಱಗಿದರೊಳು ಬಳೆವಕ್ಕಱಿಗೆ ಮಂಗಳಂ ।
ಬಡವರಿಗೆ ಕುಡುವ ಭಾವಕೆ ಮಂಗಳಂ ॥
ಎಡೆವಿಡದೆ ಜಗದೊಳಿರ್ದುಸೆಱಕಕ್ಕೆ ಮಂಗಳಂ ।
ತಡೆಯದೆಲ್ಲೆಡೆಯೊಳಿಹ ತರಹರಕೆ ಮಂಗಳಂ ॥ ೧

ಶರನಿಧಿಯೊಳುದಿಸಿದತಿಶಯಕೆ ಮಿಗೆ ಮಂಗಳಂ ।
ಸಿರಿಪೆಸರುವಡೆದ ದೇಸೆಗೆ ಮಂಗಳಂ ।
ಸರಸಿಜೋದರದೊಳಿಹ ಸಂಗತಿಗೆ ಮಂಗಳಂ ।
ಹರಿಯೆರ್ದೆಯ ನೆಲೆಗೊಂಡ ಹರಿಸಕ್ಕೆ ಮಂಗಳಂ ॥ ೨

ತಕ್ಕರಸು ಪೆರ್ಚಿಸುವ ದಾಯಕ್ಕೆ ಮಂಗಳಂ ।
ಮಿಕ್ಕುಮಿಗುವರಿವ ಪ್ರೈಮೆಗೆ ಮಂಗಳಂ ।
ಚಿಕ್ಕದೇವೇಂದ್ರನಿಗೆ ಸಿರಿಯನೀಗೆಗೊಳಿಪ ।
ಪೆಕ್ಕಳದೊಳೆಸೆವ ಪೊಸಪಿಸ್ಸಣಕೆ ಮಂಗಳಂ ॥ ೩ —೨—

॥ ರಾಗ——ಕಾಂಬೋಧಿ ॥ ತಾಳ — ಝಂಪೆ ॥

ಸತ್ಯಭಾಮೆಗೆ ಸಕಲಜಯಮಂಗಳಂ ।
ಶ್ರುತ್ಯಂತಲೋಚನೆಗೆ ಶುಭಮಂಗಳಂ ॥ ಪಲ್ಲವಿ ॥

ಚ॥ ಇನಿಯನನುಸರಿಪೆಸಗುವಿಷ್ಟಕಕೆ ಮಂಗಳಂ ।
ಮನಮುಚ್ಚುಗೊಳಿಸ ನೇಮಕೆ ಮಂಗಳಂ ।
ಇನಿದುಗುವ ಕೆಂಬವಿ ನುಡಿಸೊಚ್ಚಮಿಗೆ ಮಂಗಳಂ ।
ಅನುಸರಿಸಿ ನಡೆಸ ಒಗೆಗಾಪಗಂ ಮಂಗಳಂ ॥ ೧

ಮುನಿದಿನಿಸು ಪೊಗದೆಸೆವ ಮುಜಾಕಕ್ಕೆ ಮಂಗಳಂ ।
ಕಿನಿಸುನೋಟಗಳ ಕೊಂಕಿಗೆ ಮಂಗಳಂ ।
ಜಿನದದೊಳು ಮೂದಲಿಪ ಜಿಸ್ಣಣಕೆ ಮಂಗಳಂ ।
ಅನಿತಮೊಳು ಬಗೆಗರಗುವಚ್ಚಿಗೆ ಮಂಗಳಂ ॥ ೨

ಒಡವೆರೆದು ಹರಿಮನೊಲಿಪ್ಪೊಯ್ಯರಕೆ ಮಂಗಳಂ ।
ಎಡದೆಸೆಯ ಸೇರಿದಿರವಿಗೆ ಮಂಗಳಂ ।
ಎಡೆವಿಡದೆ ಚಿಕ್ಕದೇವೇಂದ್ರನಿಗೆ ಜಯಮೀವ ।
ಪೊಡವಿವಡದಿಯ ದಯೆಯ ಪೊಸಪಗೆಗೆ ಮಂಗಳಂ ॥ ೩ —೩—

॥ ರಾಗ—ಕಲ್ಯಾಣಂ ॥ ಆದಿತಾಳ ॥

ಸೇನಾನಾಥನಿಗೆ ಶ್ರೀಮಂಗಳಂ ।
ಶ್ರೀನಾಥಸಂಕರಂಗಸೇವಕನಿಗೆ ಮಂಗಳಂ ॥ ಪಲ್ಲವಿ ॥

ಚ॥ ಪರವಾಸುದೇವನಲ್ಲಿ ಪರಮಹರ್ಷದೊಳಿರೆ ।
ಪರಿಪರಿ ಸೇವೆಗೆಯ್ವ ಪದಕಕೆ ಮಂಗಳಂ ॥ ೧
ನಳಿನಾಕ್ಷನಾರೊಗಿಸಿ ನಲವಿನಿಂದುಳುಹಿದ ।
ತಳಿಗೆ ಪ್ರಸಾದಗೊಂಬ ಧನ್ಯತೆಗೆ ಮಂಗಳಂ ॥ ೨

ತಡೆಯಿಲ್ಲದೆ ಮುಕ್ತಿಗೆ ದಾಱಿದೋಱಿಸಲೆಂದು ।
ಶಠಕೋಪನಿಗೊಲಿದ ಸಂಪದಕೆ ಮಂಗಳಂ ॥ ೩ —೪—

॥ ರಾಗ—ಪಂತುವರಾಳಿ ॥ ತ್ರಿವುಡೆ ತಾಳ ॥

ಮಂಗಳಂ ಮಿಗೆ ಮಂಗಳಂ ॥ ಗರುಡನಿಗೆ ॥ ಪಲ್ಲವಿ ॥

ನಳಿನಾಕ್ಷನ ಪಟಿಗೆಳೆಯನೂಱಿಗದವ ।
ಪಟಿಯಿಗೆ ಒಜ್ಜಣ ಪಟ್ಟವಣೆ ।
ಒಳುದೇರೆನಿಸಿಯುನ್ನತಿವಡೆದೊಪ್ಪುವ ।
ಪಟಿನುಡಿಯೊಡಲಿನ ಪಕ್ಕಿಗೆ ॥ ೧

ಮಂಗಳಂ ಮಿಗೆ ಮಂಗಳಂ ॥ ಮಹಾಶೇಷನಿಗೆ ॥ ಪ ॥

ಚ ॥ ವಾಸುದೇವಗೆ ನಲ್ವಣೆ ಪಾವ್ರಗೆ ಮೆ ।
ಲ್ವಾಸಿಗೆ ಸತ್ತಿಗೆ ಬಣ್ಣದುಡೆ ।
ಈಸಕಲಾಕೃತಿಯಿಂದೊಳ್ಗೆಯ್ತ್ತುಡ ।
ವಾಸನೆಯಿಱಿಯುದ ಪಾವಿಗೆ ॥ ೨

ಮಂಗಳಂ ಮಿಗೆ ಮಂಗಳಂ ॥ ಪರಕಾಲನಿಗೆ ॥ ಪ ॥

ಚ ॥ ನುಡಿಸುಡಿಯೊಳು ಜೇನುಗುವ್ರೊಲು ಮಾಧವ ।
ನಡಿಗಳ ಮ್ಯೆಮೆಯುಸಱುಹಿದಗೆ ।
ತಡೆದು ನಿಲಿಸಿ ಬಾಳ್ಗಡಿತದ ಬಲ್ಮೆಯೊ ।
ಳೊಡನೆ ಮಂತ್ರವ ಕೊಂಡುತ್ತಮಗೆ ॥ ೩ —೫—

॥ ರಾಗ—ಭೈರವಿ ॥ ಅಟ್ಟತಾಳ ॥

ಶಠಕೋಪಯೋಗಿಗೆ ಮಂಗಳಂ । ಹರಿ ।
ಯಡಿಯ ಪಾವುಗೆಗೆ ಮಂಗಳಂ ॥ ಪಲ್ಲವಿ ॥
ಚ ॥ ವಕುಳಾಭರಣಗೆ ಮಂಗಳಂ । ವೈಷ್ಣವರೆಱೆಯುಗೆ ಮಂಗಳಂ ॥
ಅಕಳಂಕಚರಿತಗೆ ಮಂಗಳಂ । ಆದಿದೇಶಿಕನಿಗೆ ಮಂಗಳಂ ॥ ೧
ಸೇನೇಶದಾಸಗೆ ಮಂಗಳಂ । ಸೇವಕಪಾಲಗೆ ಮಂಗಳಂ ।
ಮಾನಿತಚರಿತಗೆ ಮಂಗಳಂ । ಮಧುರಕವೀಂದ್ರಗೆ ಮಂಗಳಂ ॥ ೨
ಕುರುಕಾಪುರೀಶಗೆ ಮಂಗಳಂ । ಗುಣಗಣನಿಳಯಗೆ ಮಂಗಳಂ ।
ಕರುಣಾನಿವಾಸಗೆ ಮಂಗಳಂ । ಕಾರಿಕುಮಾರಗೆ ಮಂಗಳಂ ॥ ೩ —೬—

॥ ರಾಗ—ಮಧುಮಾಧವಿ ॥ ಅಟ್ಟತಾಳ ॥

ಮಂಗಳಂ ಶುಭಮಂಗಳಂ ।
ಮಂಗಳಮೆಂಬೆರುಮಾನಾರಿಗೆ । ಜಯ ॥ ಪಲ್ಲವಿ ॥

ಚ॥ ಅಹಿರಾಜನಂಶನೆಂದನಿಬರುಮಱಿವಂತೆ ।
ಮಹಿಯೊಳುದಿಸಿದಗೆ ಮಂಗಳಂ ।
ಸಹಜಗುಣಗಳಿಂದೆ ಜಗದೊಳೇಱಿಗೆವೆತ್ತ ।
ಮಹನೀಯಚರಿತಗೆ ಮಂಗಳಂ ॥ ೧
ಶ್ರುತಿವಿಪರೀತವ ಸೊಲ್ಲಿಪ ವಿವಿಧಕು ।
ಮತಿಗಳ ಗೆಲಿದಗೆ ಮಂಗಳಂ ।
ಸ್ತುತಿಸೆ ವೈದಿಕದಿವ್ಯಸೂರಿನಿವಹಸ ।
ನ್ಮತವ ಬಳಸಿದಗೆ ಮಂಗಳಂ ॥ ೨
ಆನತರಿಗೆ ವೇದಾಂತವಱಿಹಿ ಪರ ।
ಮಾನಂದವಡೆದಗೆ ಮಂಗಳಂ ।
ಶ್ರೀನಾಥನೊಲುಮೆಯ ಸೇವಕನೆನಿಪ ರಾ ।
ಮಾನುಜಾಚಾರ್ಯಗೆ ಮಂಗಳಂ ॥ ೩ —೭—

ಮಂಗಳ ಸಪ್ತಪದಿ ಸಂಪೂರ್ಣಂ.



ಗಡಿ ಮೂಡಲ್ ತೊರೆಯೂರನಂತಗಿರಿಗಳ್ ಧಾರಾಪುರಂ ತೆಂಕಲಾ ।
ಪಡುವಲ್ ಬಳ್ವಗೆಬಂದಿಗಾಱ ವಸುಧಾರಾಭಿಖ್ಯೆಯೂರ್ಮತ್ತಮಾ ॥
ಬಡಗಲ್ತಾಂ ಪುಳಿಯೋಱುಗುಂಡುಮಲೆಗಳ್ ನೀನಾಳ್ವ ದೇಶಕ್ಕೆ ಮೇಣ್ ।
ಗಡಿ ನಾಲ್ಕುಂ ಕಡಲೊಳ್ಜಸಕ್ಕೆ ಸರಿಯೇ ನಿನ್ನೇಱಿಗಿನ್ನೆಲ್ಲಿಯುಂ ॥ ೫೫
ಕ್ಷ್ವೇಳಾರಾವದೆ ಸೀರೆಯುಂ ಪಟುಪಥಕ್ಕಾರಂಗಳಂ ಜೆಂಗಳೂರ್ ।
ಧೂಳೀಪುಂಜವೆ ಚೆಂಜೆವಂಡೆನಲೊಡಂ ಪಾಂಡ್ಯಾವನೀಮಂಡಲಂ ॥
ಚೋಳೋರ್ವೀತಲಮೆಯ್ದೆ ಬಾಳ ಪೊಳಪಿಂಗಾಳಾದುವಂದಂವೆ ತಾಂ ।
ವೇಱಿಂ ಕಾಳೆಗದೊಳ್ಪದಕ್ಕೆ ಚಿಕದೇವಾ ಬಲ್ಲರೊಳ್ ಬಲ್ಲಹಾ ॥ ೫೬

॥ ಲಯಗ್ರಾಹಿವೃತ್ತ ॥

ಅಂದಿವನಿನಳ್ಕಿ ಭಯದಿಂದೆ ಮಣಿದಿರ್ದ ನೃಪ
ಬೃಂದಮನಿತುಂ ಭರದೊಳೊಂದುವೆರೆದೊಳ್ಪಿಂ ।
ಸಂದಿಸಿ ಶಿವಾಜಿಗನುವಿಂದೊರೆದು ಮರ್ಮಮನ ।
ಮಂದಿರೊಡಗೂಡಿಯುವನಂದು ಕವಡಿಂದಂ ॥
ಸಂದಣಿಯ ಕಾಳೆಗದೊಳೊಂದಿನಿಸು ಮುಂಬರಿಯೆ
ಬಂದೆಱಗಿ ಪಾವುಗಳ ಗೊಂದಣದೆ ವಿಷ್ಣು ।

ಸ್ಯಂದನದ ಮಾಟಕ್ಕೆಯೊಳ್ ಕೊಂದು ಕೊಲೆಯಾಡಿದವಳ
ವಿಂದೆ ಚಿಕದೇವನೃಪನಿಂದು ಸೊಗವಾಳ್ಗೆಂ ‖ ೫೭

‖ ಗದ್ಯ ‖

ಇದು ಸಕಲಜಗದುದಯವಿಭವಾದಿಲೀಲನುಂ, ಲಕ್ಷ್ಮೀಲೋಲನುಂ, ಅಖಿಲಹೇಯಪ್ರತ್ಯನೀಕನುಂ, ಅಪ್ರಾಕೃತಪ್ರತೀಕನುಂ, ಅವಾಪ್ತಸಮಸ್ತ ಕಾಮನುಂ, ಅನಂತಕಲ್ಯಾಣಗುಣಗಣಾರಾಮನುಂ, ಸಾರಸಭವಪೂಜಿತ ನುಂ, ಸನಕಮುನಿಸಭಾಜಿತನುಂ, ಯದುಶಿಖರಿಶಿಖರಾಲಂಕಾರನುಂ, ಯತಿ ರಾಜಸಂಪತ್ಕುಮಾರನುಂ, ಆಶ್ರಿತರಕ್ಷಾಪರಾಯಣನುಮಪ್ಪ ಯಾದವಗಿರಿ ನಾರಾಯಣನಡಿದಾವರೆಯಾಟಿಗವೊಳ್ ಬಳೆದೋಟಿಗೆವಳೆವ ಯಾದವಕು ಲೋದ್ಧಾರಕನುಂ, ಶುಭಗುಣೋದ್ಧಾರಕನುಮಾದ ದೇವರಾಜನೃಪಾಲ ಪೌತ್ರನುಂ, ಅತ್ರಿಗೋತ್ರಪವಿತ್ರನುಂ, ದೊಡ್ಡದೇವರಾಜ ಗರ್ಭಾಂಬು ಧಿಕಲಾಧರನುಂ, ಸಕಲಕಲಾಧರನುಂ, ಅಶ್ವಾರೋಹಣಕಲಾರೇವಂತನುಂ, ಗಜಾರೋಹಣಮಘವಂತನುಂ, ಅಸ್ತ್ರವಿದ್ಯಾಭೃಗುರಾಮನುಂ, ಅಪ್ರತಿ ಮಧಾಮನುಂ, ಕರ್ಣಾಟಭೂಮಂಡಲಾಧೀಶನುಂ, ದೇವಸಂಕಾಶನುಂ. ಪಶ್ಚಿಮರಂಗಪುರಸಿಂಹಾಸನಾಧಿಷ್ಠಿತನುಂ, ಸುಪ್ರತಿಷ್ಠಿತನುಂ, ದೇವಬ್ರಾ ಹ್ಮಣ ಪರಿಪಾಲನೈಕಾನ್ತನುಂ, ಸಕಲಪ್ರಜಾಕಾನ್ತನುಂ, ಅಸಕೃದಾವ ರ್ತಿತಷೋಡಶಮಹಾದಾನನುಂ, ಆಶ್ರಿತಸರ್ವಶ್ರೇಯೋನಿದಾನನುಂ, ರಸಿಕಜ ನಕರ್ಣರಸಾಯನೀಕೃತಸಂಗೀತವಿಸ್ತರನುಂ, ಸಾಹಿತ್ಯವಿದ್ಯಾನಿಕಷಪ್ರಸ್ತರ ನುಂ, ಪೂರ್ವದಿಗ್ವಿಜಯಯಾತ್ರಾವಿತ್ರಾಸಿತ ಚೇದಿಮಂಗಲೋಪಾನ್ತ ಕಾನ್ತಾ ರೋಪಗೂಢವ್ಯೂಢಸೇನಾಭಿಗುಪ್ತಪಾಂಡ್ಯಸೇನಾಧಿಪ ಸಂಗರಕಿರೀಟ ವೆಂ ಕಟಕೃಷ್ಣಶಿಬಿರಸರ್ವಸ್ವಹರಣಸಮುಸಮಯಸಮಾಕ್ರಾನ್ತ ಮಳಲಿ ಪರಮ ತ್ತಿಶಾಲೆಯ ಚೇದಿಮಂಗಲ ಕೊಂಗು ಧಾರಾಪುರಾದಿ ಪಾಂಡ್ಯನೃಪದುರ್ಗಮ ದುರ್ಗಸ್ತೋಮನುಂ, ಸಂಗರಭೀಮನುಂ, ಉದ್ವೃತ್ತಸುರತ್ರಾಣಚಮೂವಿ ಕ್ಷೋಭಣವಿಚಕ್ಷಣವಿಕಟಮರಾಟ ಶಿವಾಜಿವಾಜಿಸೇನಾಧಿಪ ಜಯತಜಿಕಾಟ ಕರ ದಾದಜಿಕಾಕಡ ಪ್ರಮುಖಕಂಠನಾಳೋಚ್ಛಲದ್ರಕ್ತಧಾರಾಸಿಕ್ತಕೃ ಪಾಣಸಂದರ್ಶನವಿಲೀನಹರಜಿ ಸಂತಜಿ ಮುಖ್ಯಮಹಾರಾಷ್ಟ್ರನೃಪಪ್ರವೇಕ ನುಂ, ಅಪ್ರತ್ಯನೀಕನುಂ, ಗಂಭೀರೋದ್ಧತಪರಿಘಾವರಣಭೀಷಣಶತಘ್ನೀ

ಶತಸಂಕುಲಮತ್ತಮಾವಳಿಸೇನಾವಳೀವರ್ಮಿತಧರ್ಮಪುರೀಪ್ರಸಭಾಕ್ರಮಣ ಶ್ರಮಣನಿರ್ಜನೀಕೃತ ಕೆಂಗೇರಿ ವಾಮಲೂರು ಜೇವುಪಳ್ಳಿ ಜೈರನೆತ್ತ ಕುನ್ನತ್ತೂರ್ ಮುಖ್ಯದುರ್ಗವರ್ಗನಿರಾಯಾಸಾಕ್ರಮಣನಿವೃತ್ತನಿಜಸೈನಿಕಸಮೂಹನುಂ, ಅಪಪಕಲಾಶ್ವೇತವಾಹನನುಂ, ದಕ್ಷಿಣದಿಗ್ವಿಜಯಯಾತ್ರಾವಿತ್ರಾಸಿತ ಪಲಾಯಿತ ಪಾಂಡ್ಯಬಲಾನುಧಾವನಪ್ರಾನ್ತನಿಜಬಲವಿಶ್ರಾನ್ತಿಸ್ಥಾನೀಕೃತಜಲಧಿವೇಲಾತನಾಲಾರಣ್ಯನುಂ, ಆನತಜನಶರಣ್ಯನುಂ, ಪಶ್ಚಿಮದಿಗ್ವಿಜಯ ಪ್ರಸ್ತಾನಭೇರೀರವಾಕರ್ಣನಸಂಭ್ರಾನ್ತದುರ್ದ್ಧಾನ್ತಘುಶಾಸಖಾನಸನಾಥ ಕೆಳದಿನೃಪ ಸಮರ್ಪಿತ ಸರ್ವಸ್ವನಿರ್ವಾಪಿತಕೋಪನುಂ, ಅಮಿತಪ್ರತಾಪನುಂ, ಉತ್ತರದಿಗ್ವಿಜಯಸಮಯಾಭಿಯಾತ ಕುತುಪಶಾಹ ವಾಹಿನೀವಿಮರ್ದನಕ್ಷಣಾಕ್ರಾಂತ ಕಂಡಿಕೆರೆ ಚಿಕ್ಕನಾಯಕನಹಳ್ಳಿ ಹೊನ್ನವಳ್ಳಿ ಸಾರತವಳ್ಳಿ ತುರುಗೆರೆ ಪ್ರಮುಖದುರ್ಗ್ರಹಪ್ರಾಕಾರವಾರನುಂ, ಅಸಹಾಯಶೂರನುಂ, ಜಡಕನದುರ್ಗಹಠಾವಗ್ರಹಣವೇಳಾನಿಖಾತಸುರಂಗಮುಖಾನಲೋತ್ಕ್ಷಿಪ್ತಗಂಡೋಪಲಪಾತನಿರ್ಧೂತ ಬಿಜ್ಜವರ ಮದ್ದಗಿರಿ ಚೆನ್ನರಾಯದುರ್ಗ ವೀರಣದುರ್ಗಾದ್ಯಸಂಖ್ಯದುರ್ಗವರ್ಗಾಕ್ರಮಣಾವಸರಾವನತಸಾಮಂತನೃಪಾಲಮೌಳಿಮಣಿಘೃಣಿನೀರಾಜಿತಪದರಾಜೀವನುಂ, ಮಹಾನುಭಾವನುಂ, ಸಾಹಜಿನಾಮಕಮರಾಟನೃಪರಾಜಧಾನೀಕೃತಾಭಂಗುರಬೆಂಗಳೂರ್ ಹರಣನಿಷ್ಪ್ರಾಣಿತ ಶಂಭುಜಿ ಸಾಹಜಿ ಸಂತಜಿ ಹರಜಿ ಪ್ರಮುಖ ಮಹಾರಾಷ್ಟ್ರನೃಪಾಲಜಾಲನುಂ, ರಿಪುಕುಲಕಾಲನುಂ, ಸಂಗ್ರಾಮರಾಮನುಂ, ಸಾಹಸೋದ್ದಾಮನುಂ, ಪ್ರೌಢಪ್ರತಾಪನುಂ, ಪ್ರಕಟಿತಾಟೋಪನುಂ, ಅಮಿತಪರಾಕ್ರಮನುಂ, ಅಭೇದ್ಯವಿಕ್ರಮನುಂ, ಕರ್ಣಾಟಚಕ್ರವರ್ತಿಯುಂ, ಕಲ್ಯಾಣಕೀರ್ತಿಯುಂ, ಲೋಕೈಕವೀರನುಂ, ವೀರರೊಳ್ಗಂಡನುಂ, ಗಂಡರೊಳ್ಗಂಡನುಂ, ಅಂತೆಂಬರ ಗಂಡನುಮೆನಿಸಿ ನೆಗಳ್ದ ಶ್ರೀಮದಪ್ರತಿಮವೀರನರಪತಿ

ಶ್ರೀ ಚಿಕದೇವಮಹಾರಾಜ ವಿರಚಿತಮಪ್ಪ ದಿವ್ಯಪ್ರಬಂಧಂಗಳೊಳ್

ಶ್ರೀ ಗೀತಗೋಪಾಲ ಮಹಾಪ್ರಬಂಧದೊಳ್

ಪೂರ್ವಭಾಗಂ ಸಂಪೂರ್ಣಂ.



|| ಶುಭಮಸ್ತು ||

# ಶ್ರೀ ಗೀತಗೋಪಾಲೋತ್ತರಭಾಗಂ.



ಕಂದ || ಶ್ರೀರಮಣನಖಿಲಸದ್ಗುಣ |
ವಾರಿಧಿಯಾನಂದಮಯವಿನಾಸೋದರವಿ ||
ಸ್ಫಾರಿತರೂಪಂ ಮಮಗಿರಿ |
ನಾರಾಯಣನಾಳ್ದನಕ್ಕೆ ನರಪತಿಗನಿಶಂ ||

ಅನನ್ಯೈಕರಸಂ ಸಮಸ್ತಜಗದಾಪಂದಂಗೆ ಚಕ್ರಾಯುಧಂ |
ಸೇನಾಚಕ್ರವಿಮರ್ದಿತಾಹಿತಸಮೂಹಚಕ್ರಂಗೆ ವೈಕುಂಠನ ||
ನ್ಯಾಸೋಪಾಯವಿಕುಂಠಿತಾರಿಶರಣಶ್ರೇಷ್ಠದ್ದುರ್ಗಾಪವರ್ಗಾಂಗೆ ಲ |
ಕ್ಷ್ಮೀನಾರಾಯಣದೇವನಕ್ಕೆ ಚಿಕದೇವೇಂದ್ರಂಗೆ ಸಾಮ್ರಾಜ್ಯಮಂ || ೧

ಜಡಕನ ಮಗನಿಂ ನೆಗೆದ ಪಾಪಜೆಗಳ್ ತಡೆಗಟ್ಟಿ ಬಟ್ಟೆಯಂ |
ಕೊಡನ ಕುಮಾರನಾಣತಿಯಿನೆಂದಿನವೊಲ್ ಬಸದತ್ತೊ ಬಿಂಜಮಂ ||
ಎಡಬಲದತ್ತ ಸುತ್ತುವಿನಮಾಜಿಯೊಳಾವ ವೈರಿವೀರರಂ |
ನುಡಿಸೆ ಪೊವದ್ದ ಯುದ್ಧಗರುಡಧ್ವಜನುದ್ಧತಿಗೆತ್ತನಂದಿನಂ || ೨

ಬಡಲೊಡನೊರ್ವನಂ ದಿವಮನೇಱಿಸಿದಾಕುಶಿಕಾತ್ಮಜಂಗವೇಂ |
ಬಿಡಮಮೆ ಸಾಕು ನಿಲ್ಕೆ ಚಿಕದೇವನೃಪಾಲವರಂ ಸುರಂಗದಿಂ ||
ಜಡಕನ ಮರ್ಗದೊರ್ಮೊಗದ ಕೋಂಟೆಯನೇಱುವ ವೀರರೊಳ್ಗಿನೇ |
ಅಡರಿಸಿದಂ ದಿವಕ್ಕಮದು ಸೈ ಮಝುನೂ ಭಳಿ ಪೂತು ಭಾಪುರೇ || ೩

ವಚನ || ಇಂತು ಶ್ರೀಗೀತಗೋಪಾಲಮಹಾಪ್ರಬಂಧದೊಳ್ ಪೂರ್ವಭಾಗದೇೞುಂ ಸಪ್ತಪದಿಗಳೊಳ್ ಗೋಪಿಕಾವೃತ್ತಾಂತನಿರೂಪಣವ್ಯಾಜದಿಂ ಭಗವದ್ಗುಣಂಗಳನನುಭವಿಸಿ, ಈಯುತ್ತರಭಾಗದೇೞುಂ ಸಪ್ತಪದಿಗಳೊಳೀ ಗುಣಾನುಭವಂ ಎಡೆವಿಡದೆ ದೊರೆಕೊಂಬ ಮೋಕ್ಷಮುಂ ಸಾಧಿಪುದರ್ಕೆ ಉಪಾಯಮಾದ ಪ್ರಪತ್ತಿಸ್ವರೂಪಮಂ ನಿರೂಪಿಸುವರ್. ಇದಱೊಳೊ

ವರ್ಣದಲ ಸಪ್ತಪದಿಯೊಳ್ ತಾಂ ಪ್ರಸತ್ತಿಗೆಯ್ವ ದೇವತೆಯುಂ ಗುರುಪರಂ ಪರೆಯೊಡನೆ ನುತಿಗೆಯ್ವರ್. ಇದಱಿಂದೊಳದೊವರ್ಣದಲ ಪಂಚಪದಿಯೊಳ್ ತಮ್ಮ ಯದುಕುಲದೇವತೆಯುಪ್ಪ ಯಾದವಗಿರಿನಾರಾಯಣನ ಕಲ್ಯಾಣಗುಣಂ ಗಳನನುಭವಿಸಿಯುವರ್ಕೆ ಮಂಗಲಾಶಾಸನಂಗೆಯ್ವರ್.

॥ ರಾಗ—ಯರಕಲಕಾಂಬೋಧಿ ॥ ಆದಿತಾಳ ॥

ಮಂಗಳಂ ತಿರುನಾರಾಯಣನಿಗೆ । ಮಿಗೆ ಮಂಗಳ ಯದುಗಿರಿನಿಲಯನಿಗೆ ॥ಪಲ್ಲ॥
ಚ॥ ತಾನೊಲಿದರ್ಚಾವತಾರವಡೆದು ಚತು
ರಾನನಲೋಕದೊಳವತರಿಸಿ ।
ಆನಂದಮಯವೆನಿಪತಿಶಯವೆಸರ ವಿ
ಮಾನಮಧ್ಯದಿ ನಿಂದ ಮಹನೀಯಗೆ ॥ ೧
ವನಜಸಂಭವನ ಭವನದೊಳು ಬಹುಕಾಲ
ವನುಪಮದಿವ್ಯಾರ್ಚನೆವಡೆದು ।
ಸನತುಕುಮಾರನ ಸಂಗಡ ಬದರಿಯ
ಬನದೆಡೆಗೆಯ್ತಂದ ಭವ್ಯನಿಗೆ ॥ ೨
ಪಲವಗೆ ಪೂಜುವ ಬದರಿನಾರಾಯಣ
ನೊಲಿದು ಮುನಿಗಳು ತನ್ನೊಡನೆ ಬರೆ ।
ಕಲಿಕಲುಷವನೆಲ್ಲ ಕಳೆವ ಯಾದವಗಿರಿ
ನಿಲಯದಿ ನೆಲಸಿದ ನಿರುಪಮಗೆ ॥ ೩
ಆದಿವಿಡಿದು ದತ್ತಾತ್ರೇಯ ರಾಘವ
ಯಾದವ ರಾಮಕೃಷ್ಣಾದಿಗಳು ।
ಪಾದವಂದನೆಗೆಯ್ದು ಭಜಿಸೆಯುವರ ಪೊರೆ
ವಾದಿದೇವನಿಗಂಬುಜಾಕ್ಷನಿಗೆ ॥ ೪
ರಾಮಾನುಜಮುನಿರಾಜ ಭೂಮಿಪರೊಳು
ಪ್ರೇಮವ ಮಿತಿಮೀಱಿಬಳಸಿದಗೆ ।
ಶ್ರೀಮಂತನಿಗೆ ಮಿಗೆ ಚಿಕದೇವರಾಯಗೆ
ಕಾಮಿತಾರ್ಥವನೀವ ಗರುವನಿಗೆ ॥ ೫ —೧—

ವಚನ ॥ ಈಯೆರಡನೆಯ ಪಂಚಪದಿಯೊಳ್ ಮುಂ ತಮ್ಮ ಕೂಟಸ್ಥರ್ ದ್ವಾರಕಾನಗರದಿಂ ಕರ್ಣಾಟಕಕ್ಕೆ ಬಂದು ಮೊತ್ತಮೊದಲ್ ತಾವುಗೊಂಡು ದಱಿಂ ತಾಯ್ವನೆಯೆನಿಪ ಮಹೀಶೂರನಗರಕ್ಕೆ ಅಧಿದೇವತೆಯುಪ್ಪ ಲಕ್ಷ್ಮೀ ನಾರಾಯಣಂಗೆ ಮಂಗಳಾಶಾಸನಂಗೆಯ್ವರ್.

॥ ರಾಗ—ಮಧುಮಾಧವಿ ॥ ಅಟ್ಟತಾಳ ॥

ಮಂಗಳಂ ಲಕ್ಷ್ಮೀರಮಣಗೆ। ಮಿಗೆ ಮಂಗಳ ಮಹಿಶೂರಪುರವಾಸಗೆ ॥ ಪ ॥

ಚ ॥ ಸಿರಿರಾಣಿಯೊಡಗೂಡಿ ಶೇಷಪೀಠದೊಳು ಕ
ಟ್ಟರಸುತನದೊಳೆಸೆವನಘನಿಗೆ ।
ಪರವಾಸುದೇವಗೆ ಭಕ್ತರಸಾನಂದ
ಪರವಶಗೊಳಿಸುವ ಭವ್ಯನಿಗೆ ॥ ೧
ಅಮಿತಗುಣಾಢ್ಯನಿಗಂಬುನಿಧಿಯೊಳಜ
ವಮರಿಕೆ ನಿದ್ದೆಗೆಯ್ವಚ್ಯುತಗೆ ।
ಅಮರರ ಮೊಱೆಗೇಳಿ ಅಸುರರೇಳಿಗೆಯನು
ಶಮನಗೊಳಿಸಿ ತೋರ್ಪ ಚದುರನಿಗೆ ॥ ೨
ಸುಗುಣರ ಮನ್ನಿಸಿ ವಿಗಡರ ಮಗ್ಗಿಸಿ ।
ಬಗೆಗೊಳೆ ಧರ್ಮವ ಬಲಿಸಿದಗೆ ।
ಯುಗಯುಗದೊಳು ಪುಟ್ಟಿಯುಚಿತಚರಿತ್ರದಿ ।
ಜಗವ ಪಾವನಗೆಯ್ವ ಜಾಣನಿಗೆ ॥ ೩
ಬಲ್ಲರು ತನ್ನನೆಂದೋಳಕರಿಸದೆ ಮಿಗೆ ।
ಪೊಲ್ಲದರೆಂದೊಮ್ಮೆ ಪೊಱತಟ್ಟದೆ ।
ಎಲ್ಲರ ಹೃದಯದೊಳಿರ್ದವರಿಗೆ ಬಲ್ಮೆ ।
ಬಲ್ಲವಿಕೆಗಳನು ಬಲಿಸುವಗೆ ॥ ೪
ನರಪತಿ ಚಿಕದೇವನಾಥಸಂರಕ್ಷಣ ।
ಪರನಿಗೆ ಮಹೀಶೂರಪುರವಾಸಗೆ ।
ಪರವ್ಯೂಹವಿಭವಾಂತರ್ಯಾಮಿಯರ್ಚಾವ ।
ತರಣದಿ ಲೋಗರ ಪೊರೆವನಿಗೆ ॥ ೫ —೨—

ವಚನ ॥ ಈ ಮೂಱನೆಯ ತ್ರಿಪದಿಯೊಳ್ ತಮ್ಮ ರಾಜಧಾನಿಯಪ್ಪ ಶ್ರೀರಂಗಪಟ್ಟಣದ ಪಶ್ಚಿಮರಂಗರಾಯನ ಗುಣಂಗಳಂ ಪೊಗಳ್ವರ್.

॥ ರಾಗ—ಕುರಂಜಿ ॥ ಅಟ್ಟತಾಳ ॥

ಪಾವನಗುಣನಿಸ್ಸೀಮನ ।
ಭಾವುಕಹೃದಯಾಭಿರಾಮನ। ನಾ ।
ಭಾವಿಪೆ ಪರಿಪೂರ್ಣಕಾಮನ ।
ಪಶ್ಚಿಮಶ್ರೀರಂಗಧಾಮನ ॥ ಪಲ್ಲವಿ ॥

ಚ ॥ ಮಂಗಳಫಣಿಪತಿತಲ್ಪನ ।
ಮಹನೀಯಸತ್ಯಸಂಕಲ್ಪನ ।

ಅಂತ । ರಂಗದೊಳಿಡುವೆಯೆನ್ನ ಪ್ಪನ ।
ಶ್ರೀ । ರಂಗಪಟ್ಟಣದ ರಂಗಪ್ಪನ ॥ ೧

ನೀಲನೀರದ ಸಂಕಾಶನ ।
ನಿರವಧಿನಿತ್ಯಪ್ರಕಾಶನ ।
ಭಕ್ತ । ಪಾಲನ ಕಲಿತಾವೇಶನ ।
ನಾ । ಭಜಿಸುವೆ ಶ್ರೀರಂಗೇಶನ ॥ ೨

ಸರಸಿಜಭವ ಭವಧ್ಯೇಯನ ।
ಮುನಿ । ವರಗೌತಮಭಾಗಧೇಯನ ।
ನಿರುಪಮಭಕ್ತಿ ವಿಧೇಯನ ।
ನಾ । ನೆನೆವೆ ಪಶ್ಚಿಮರಂಗರಾಯನ ॥ ೩ —೩—

ವಚನ ॥ ಈ ನಾಲ್ಕನೆಯ ತ್ರಿಪದಿಯೊಳ್ ಪ್ರಸನ್ನವಿಷಯದೊಳೊರ್ವೆರ್ ದೋಷವೆಣಿಸ ಜಗದೀಶನ ದೋಷಮಂ ಕಳೆದು ಕೃಪೆಯಂ ಜನಿಯಿಪ ಶ್ರೀರಂಗನಾಯಕಿಯುಂ ಪೊಗಳ್ವರ್.

॥ ರಾಗ—ಮುಖಾರಿ ॥ ಅಟ್ಟತಾಳ ॥

ನಿನ್ನ ಪೊಗಟಲೆನ್ನಳವೆ ।
ರಂಗನಿಲಯನ ಭಾಗ್ಯದ ಫಲವೆ ।
ನಿನ್ನೊ । ಳೆನ್ನ ನುಡಿಯು ಬಿತ್ತಿ ಬೆಳೆವೆ ।
ಯೆನ್ನಿಷ್ಟಾರ್ಥವ ಕೈಕೊಳುವೆ ॥ ಪಲ್ಲವಿ ॥

ಚ ॥ ಕಡಲೊಳೊಗೆದ ಕನ್ನೆ ರನ್ನೆ ।
(ನಿತ್ಯ)ಕಲ್ಯಾಣಗುಣಸಂಪನ್ನೆ ।
ಕಡುವಣ್ಣವಿಡಿದ ಚೆಂಬೊನ್ನೆ ।
ರಂಗಾಧೀಶನ ಮನದನ್ನೆ ॥ ೧

ಆರಯ್ಯೆ ನಿನ್ನ ಮಗ ಬೊಮ್ಮ ।
ಅಲ್ಲಾ ಚಂದ್ರಶೇಖರ ಪೊಮ್ಮ ।
ನಿನ್ನ ಸೇರಿರೆ ಹರಿಪರಬೊಮ್ಮ ।
ಅಮ್ಮ ಶ್ರೀರಂಗನಾಚ್ಚಾರಮ್ಮ ॥ ೨

ಶ್ರೀರಮಣಿ ಶ್ರುತಿಗೇಯೇ ।
ಸಿದ್ಧೋಪಾಯಸಹಾಯೇ ।
ಈರೇಳು ಲೋಕದ ತಾಯೇ ।
ರಂಗೇಶಪದಾಂಬುಜಛಾಯೇ ॥ ೩ —೪—

ವಚನ || ಈ ಐದನೆಯ ತ್ರಿಪದಿಯೊಳ್ ಲಕ್ಷ್ಮಿಯತ್ತಣಿಂದಧಿಕರಿಸಿದ ಮೋಕ್ಷವಿದ್ಯೆಯಂ ಪರಮಪದದಿಂದಿಳೆಗಿಳಿಪಿದ ವಿಷ್ವಕ್ಸೇನರಂ ಶರಣುಗುಬ್ಬನರ್.

|| ರಾಗ—ಕಾಂಬೋಧಿ || ಆದಿತಾಳ ||

ಸೇನಾನಾಥ ಸೇರಿದೆ ನಿನ್ನ ।
ಆನತವತ್ಸಲ ವಿಷ್ವಕ್ಸೇನ ವಿಜಿತಾರಿಸೇನ || ಪಲ್ಲವಿ ||

ಚ || ಪರಮಕೃಪಾಲಯ ಪಾಲಿಸು ಮತಿಯ ।
ದೊರೆಕೊಳಿಸೆನಗೆ ಸತ್ಪುರುಷಸಂಗತಿಯ ||
ಕರುಣಿಸು ನಿನ್ನಡಿಗೆರಗುವ ಮತಿಯ ।
ಭರದಿ ಕೈಸೇರಿಸು ಭಾಗ್ಯೋನ್ನತಿಯ || ೧

ಶ್ರೀಕರಸೂತ್ರವತಿಯ ಮನದನ್ನ ।
ಲೋಕನಿಯಮನಾಲೋಕಸಂಪನ್ನ ।
ಆಕುರುಕೇಶನನಾಳಿದ ಗನ್ನ ।
ಸಾಕು ಅನಾಥನ ಸಲಹೊ ನೀಯೆನ್ನ || ೨

ನಳಿನಾಕ್ಷಗೆ ಮಿಗೆ ನಚ್ಚಿನ ಕೆಳೆಯ ।
ತಳಿಗೆ ಪ್ರಸಾದವ ಸವಿವಗ್ಗಳೆಯ ।
ಕಳೆದು ಭವಾಂತರಕಲುಷಾವಳಿಯ ।
ತಳುವದೆ ಕೈವಿಡಿ ಸದ್ಗುಣನಿಳಯ || ೩

—೫—

ವಚನ || ಈ ಆರನೆಯ ತ್ರಿ[illegible]ಳ್ ಪ್ರಪನ್ನಜನಕೂಟಸ್ಥರಪ್ಪ ನಮ್ಮಾಳ್ವಾರಂ ನೆಮ್ಮುವರ್.

|| ರಾಗ— [illegible]ವ || ರೂಪಕತಾಳ ||

ನಮ್ಮಾಳ್ವಾರೆ ನ[illegible] ।
ಗಮ್ಮನೆ ಸಲಹೆ [illegible]ಶಾಸಂಪನ್ನ || ಪಲ್ಲವಿ ||

ಚ || ಕಡುಗಿ ವಿಭಾಗಿಸಿ ಕರಣಾಳಿ ಪಡೆಯ ।
ಶಠಗೋಪವೆಸರನು ಪಡೆದಗ್ಗಡೆಯ ।
ಪಿಡಿದಿರುವೆನು ಬಿಗಿಬಿಗಿದು ನಿನ್ನಡಿಯ ।
ಸಡಿಲ ಬಿಡದೆ ಯೆನ್ನ ಸಲಹುಹುಸೊಡೆಯ || ೧

ಅಂದು ಮಧುರಕವಿಹರುಷವ ತಾಳ್ದಿ ।
ಅಂದದಿ ದ್ರವಿಡಾಮ್ನಾಯವ ಪೇಳ್ದಿ ।

ಕುಂದದೆ ಶ್ರೀಶನ ಗುಣಗಳ ಪೊಗಳ್ದು ।
ಸಂದ ಸಕಲದುರ್ಮತಗಳ ತಗುಳ್ದೆ ॥ ೨

ಒಡನೆ ರನ್ನದ ಪಾವುಗೆಯ ರೂಪಾಂತೆ ।
ಬಿಡದೆ ಶ್ರೀಧರನಡಿಯೆಡೆಯೊಳು ನಿಂತೆ ।
ತಡೆಯದೆ ಮುನಿಗಳ ಮುಡಿಯೊಳೊರಂತೆ ।
ಕಡುರಮ್ಯವಾದ ಶಿಖಾಮಣಿಯಂತೆ ॥ ೩ —೬—

ವಚನ || ಈ ಏಳನೆಯ ತ್ರಿಪದಿಯೊಳ್ ತಮ್ಮ ಯಾದವಗಿರಿಗೆ ಕುಲದೇವರೆನಿಸಿ ಯದುಗಿರಿಯೊಳ್ ನೆಲಸಿದ ರಾಮಪ್ರಿಯಂಗೆ ಪ್ರಿಯತಮರೆನಿಸಿದ ರಾಮಾನುಜರಂ ಸನ್ನುತಿಸುವರ್.

॥ ರಾಗ—ಯರಕಲಕಾಂಬೋಧಿ ॥ ಅಟ್ಟತಾಳ ||

ಶ್ರೀಭಾಷ್ಯಕಾರ । ಪಾಲಿಸೆನ್ನ ಶ್ರೀಭಾಷ್ಯಕಾರ । ಶ್ರೀಭಾಷ್ಯಕಾರಾದಿಶೇಷಾವತಾರ । ಶೋಭನ[1] ಗುಣಗಣ[1] ಸುಜನಮಂದಾರ || ಪಲ್ಲವಿ ||

ಚ || ತಿರುಪತಿಯೊಳಗಂದು ತಿರುವೇಂಕಟೇಶಗೆ ।
ತಿರುಲಾಂಛನವಿತ್ತ ದೇಶಿಕೋತ್ತಮನೆ ।
ಪರಿಪರಿಯುಕ್ತಿಯಿಂ ಪರವಾದಿಗಳನೆಲ್ಲ ।
ಪರಿದು ವೇದಾಂತತಾತ್ಪರ್ಯವ ನುಡಿದೆ || ೧

ಕುಂದದೆ ತಿರುಕುರು[illegible]ಯ ನಂಬಿಗೆ ನೀ ।
ನಂದು ಸಕಲವೇದಾಂತ[illegible]ಳ ।
ಚೆಂದವ ತಿಳುಪಿದಾಚಾರ್ಯ[illegible] ನೀ ।
ಸಾಂದೀಪನಿಯಂತೆ ಸನ್ನುತಿ[illegible]

ಡಿಳ್ಳಿಯೊಳೊಂದುಗೂಡಿರೆ ದೇ[illegible] ।
ಪಿಳ್ಳೆ ಬಾರೆನೆ ನಿನ್ನ ಬೆಂಬಳಿಯು ಬರಲು
ಉಲ್ಲಾಸದಿಂ ಯಾದವಾದ್ರಿಗೈದಿಸಿ ಚೆಲ್ವ
ಪಿಳ್ಳೆರಾಯಗೆ ನೀ ಪಿತನೆಂದೆನಿಸಿದೆ || ೩ —೭—

ಗುರುಪರಂಪರಾಸಪ್ತಪದಿ ಸಂಪೂರ್ಣಂ.



ಪಾ—1. ಗುಣಾಕರ.

## — ಸಪ್ತಪದಿ — II.

ಬಾಸುದ್ದಂ ಬಳೆದಿರ್ಪ ಮದ್ದಗಿರಿಯಂ ದಾಟಿಟ್ಟವಂ ಬಂದನಿ |
ನ್ನೇನಾನುಂ ಗಿರಿದುರ್ಗದೊಳ್ ಮಲೆಪೆವೆಂಬೀಯಾಸೆ ಬಲ್ಮೀಸಮೆಂ ||
ತಾನುಂ ನಿಲ್ವೊಡೆ ಸೊನ್ನೆವೆಟ್ಟನಡರಲ್ವೇೞ್ಕುಂ ರಿಪುಕ್ಷ್ಮಾಧವ |
ರ್ಗಾಸಾಕಂಬರಮೋಱಲಾಱದೊಡೆ ಪುತ್ತೊಂದುಂಟು ಮತ್ತಲ್ಲಿ ದಲ್ || ೫೪

ಅಱುವತ್ತುಂಸಾಸಿರಂವಾರುವದೊಡನಱುನೂಱಾನೆಮೂಲಕ್ಕವಾಳುಂ
ತುಱುಗಿರ್ಪಾಸೈನ್ಯದಿಂ ಮದ್ದಗಿರಿಗೆ ಮೊದಲೊಳ್ ಮುತ್ತಿ ದಾಚೋೞನಂ ಕೈ||
ಸೆಱೆಗೊಂಡಾಸೊರ್ಕಿಸಿಂದುರ್ಕುವರಸವರ ದುರ್ಗಂಗಳಂ ಪೆಣ್ಗಳಂ ನೀಂ |
ಸೆಱೆಗೊಂಡೇಂ ಗಂಡರೊಳ್ಗಂಡನೆನಿಪ ಬಿರುದಂ ಬೀರರೊಳ್ಗಂಡ ಕೊಂಡೈ||

ವಚನ || ಲೋಕದೊಳ್ ಕೆಲರ್ ತಾವೆಳಸಿದ ಫಲಮಂ ಸಾಧಿಸುವುವರ್ಕೆ ತಾವೆಸಗುವ ಕರ್ಮಂ ಮೊದಲಾದುದೇ ಸಾಧನಮೆಂದು ನೆಱೆನಂಬಿಯುವರ್ಕೆ ಸಹಾಯಮಾಗಿ ಜಗದೀಶ್ವರನಂ ಕೊಂಡಿರ್ಪರ್. ಈ ಚಿಕದೇವರಾಯರ್ ತಾವೆಸಗುವ ಕರ್ಮಜ್ಞಾನಭಕ್ತ್ಯಾದಿಗಳಾಳ್ದನಪ್ಪ ಶ್ರೀಮನ್ನಾರಾಯಣಂಗೆ ಮುಖೋಲ್ಲಾಸಮನಾಗಿಸುವೆಸಕಂಗಳೆಂದುಂ ಫಲಪ್ರಾಪ್ತಿಗವನೇ ಸಾಧನಮೆಂದುಂ ನಂಬಿರ್ಪರ್. ಈಯರ್ಥಮನೀಯರಡನೆಯ ಸಪ್ತಪದಿಯೊಳ್ ನಿರವಿಸುವರ್. ಅದಱೊಳಿವು ಮೊದಲಾದ ಪಂಚಪದಿಯೊಳೇನೆಲೆಯುಂ ತಮ್ಮನಾಳ್ಗೊಂಡ ಪಶ್ಚಿಮರಂಗರಾಯಂಗೆ ಬಿನ್ನವಿಸುವರ್

ರಾಗ—ಕಾಂಬೋಧಿ ॥ ಅಟ್ಟತಾಳ ॥

ನಿನ್ನ ನಂಬಿದೆ । ನಿನ್ನ ನಂಬಿದೆ । ನಿನ್ನ ನಂಬಿದೆ ನಂಬಿದೆ ॥
ನೀ । ನೆನ್ನ ಸಲಹು ಬಿಡು ನಿನ್ನ ಚಿತ್ತವಿನ್ನು ॥ ಪಲ್ಲವಿ.॥

ಚ॥ ನೀನಱಿಯದುದೆ ಪೇೞು ।
ನಿನ್ನವನೆಂಬೀಱ್ಗೆಯೊಂದೆನಗೆ ।
ನೀನಲ್ಲದನ್ಯವ ನೆನೆವನಲ್ಲ ಕರ್ಮ ।
ಜ್ಞಾನಭಕತಿವೈರಾಗ್ಯವ ನಂಬಿದವನಲ್ಲ ॥ ೧
ಎಳಮೆಯೊಳ್ ಪರಿದಾಟ ।
ಯೌವನದೊಳು ಯೆಳವೆಣ್ಗಳೊಡನಾಟ ।
ಬೞಿಕ ವಾರ್ಧಿಕದೊಳು ಪಲವೆಡರಿನ ಕಾಟ ।
ತಿಳಿಯೆ ಕರ್ಮಯೋಗ ತೀರದೆಂದಿಗು ರಂಗ ॥ ೨

ವೇದಾಂತಗಳು ಪಲವು ।
ಅವಱೊಳು ವಿವಾದಂಗಳವು ಕೆಲವು ।
ಭೇದಿಸಿ ನೋಡಲು ವೇದ್ಯವಾಗದು ತಲವು ।
ಓದುಗಳಿಂ ಜ್ಞಾನಯೋಗ ಸಾಗದೆಂದಿಗು ॥ ೩

ತನುವ ದಂಡಿಪುದರಿದು ।
ಕರಣಂಗಳ ತಡೆವುದು ಮಿಗೆಯುರಿದು ।
ಮನವ ಬಲ್ವಿಡಿವುದು ಮತ್ತಮರಿದರಿದು ।
ನೆನಹಿನೊಳ್ ವೈರಾಗ್ಯ ನೆಲೆಗೊಳ್ಳದೆಂದಿಗು ॥ ೪

ಸಿರಿಯಾಸೆ ಕಡುನಿಡಿದು ।
ಸಗ್ಗದ ನಾಡ ಸೆಱೆಯಾಸೆಯೊಡೆಗೂಡದು ।
ಮಱಳಿ ಕೈವಲ್ಯದ ಮರುಳು ಬೆನ್ನಬಿಡದು ।
ಪರಮಭಕುತಿಯೋಗ ಬಲಿಯುದೆಂದಿಗು ರಂಗ ॥ ೫ — ೧ —

ವಚನ ॥ ಈ ಯೆರಡನೆಯ ಪಂಚಪದಿಯೊಳ್ ಅಧಿಕಾರದೊಳಿರ್ಪ ತಾಂ ಬಿಡತಕ್ಕುವಂ ತಮ್ಮ ಮನವುಂ ಸೆಱೆಗೊಂಡ ರಾಯಗೋವಳಂಗೆ ಬಿನ್ನವಿಸುವರ್.

॥ ರಾಗ—ಕಾಂಬೋಧಿ ॥ ಅಟ್ಟತಾಳ ॥

ನಿನ್ನ(ನ)ಲ್ಲದೆ ನಾನೊಲ್ಲೆನು । ಆ । ನಿನ್ನಮಹಿಮೆಗಳ ಬಲ್ಲೆನು । ನೀ ।
ನಿನ್ನ ಕೈಬಿಟ್ಟೊಡೆ ಸಲ್ಲೆನು । ಸ್ವಾಮಿ । ಚೆನ್ನಿಗ ಚಿಕದೇವೇಂದ್ರವಲ್ಲಭ ಕೃಷ್ಣ ॥
ಪಲ್ಲವಿ ॥

ಚ॥ ಬಱಿಯಾಸೆಗೆ ಬಸವಳಿಯೆನು ।
ಕೆಲಬಲದ ಕೆಸಱುಗಳ ತುಳಿಯೆನು ।
ಕಿಱಿದನೆಸಗಿ ಕೀಳ್ಗಿಳಿಯೆನು ।
ನಿನ್ನನಱಿಯುದರೊಡನಾಡಿಯಾಳಿಯೆನು ಕೃಷ್ಣ ॥ ೧

ಮಿತಿಮೀಱಿಯಾನುರವಣಿಸೆನು ।
ಸಲ್ವ ಮೇರೆಗಳನು ಕಡೆಗಣಿಸೆನು ।
ಇತರದೇವತೆಗಳ ಗಣಿಸೆನು ।
ಅವರೀವ ಫಲಂಗಳನೆಣಿಸೆನು ಕೃಷ್ಣ ॥ ೨

ಮುದ್ರೆಯನೊಮ್ಮೆಯು ಮೀಱೆನು ।
ಮೀಱಿ ಮುಗ್ಗಿ ಪಲವು ಕೊಂಬಿಗೇಱೆನು ।
ಕ್ಷುದ್ರಫಲಂಗಳ ಕೋರೆನು ।
ಕುತರ್ಕ ಕುಲಕೆ ಕೊಡಲಿಯಾಗಲಾಱೆನು ಕೃಷ್ಣ ॥ ೩

ಮರುಳರೊಡನೆ ಮಾತನಾಡೆನು ।
ಮಿಕ್ಕ ಮಾಯಾವಿಗಳೊಡಗೂಡೆನು ।
ತರವನರಿಯದಾಸೆಮಾಡೆನು ।
ತಪ್ಪುದಾರಿವಿಡಿದು ನಿನ್ನ ಕಾಡೆನು ಕೃಷ್ಣ ॥ ೪ ॥
ಪಲವು ಬಟ್ಟೆಗಳನು ಮೆಟ್ಟೆನು ।
ಅಲ್ಲಿ ಪರಿದಾಟಕೆ ಕಾಸೆಗಟ್ಟೆನು ।
ಒಲಿದು ವಿಷಯಗಳ ಮುಟ್ಟೆನು ।
ಇನ್ನೊಮ್ಮೆಯುದಿಸುವಲ್ಲಿ ಪುಟ್ಟೆನು ಕೃಷ್ಣ ॥ ೫ ॥ — ೨ —

ವಚನ ॥ ಈ ಮೂಱನೆಯ ಪಂಚಪದಿಯೊಳಿಂತು ಬಿಡತಕ್ಕುವಂ ಬಿಟ್ಟವನ್ ತಾಂ ನಡೆಯತಕ್ಕುವಂ ನಿರೂಪಿಸಿ ಪೇಳಿ ಮೊರೆಕೊಂಡುದಕೆ ತನ್ನ ಸಂತಸದಿಂ ಶ್ರೀಯದುನಾಗೋಪನ್ನರಾಯಂಗೆ ಬಿನ್ನವಿಸುವನ್.

॥ ರಾಗ—ಮುಖಾರಿ ॥ ಆದಿತಾಳ ॥

ಧನ್ಯನಾದೆನು ನಾನಿಂದು ಧನ್ಯನಾದೆನು ।
ಅನ್ಯವನರಿಯದು (ನಾ) ನಿನ್ನಾಳುತನದಿ ನಿಂದೆನು ॥ ಪಲ್ಲವಿ ॥
ಚ ॥ ನಿನ್ನಡಿಗೆ ಪೊಡೆಮಟ್ಟು । ನಿನ್ನ ದಿವ್ಯನಾಮವಿಟ್ಟು ।
ನಿನ್ನ ಮುದ್ರೆಗಳನಟ್ಟು । ನಿನ್ನ ಬಿಂಡೆಯನುಟ್ಟು ॥ ೧ ॥
ನಿನ್ನಡಿಯೊಲವ ಕಂಡು । ನಿನ್ನೋಲಗವ ಕೈಕೊಂಡು ।
ನಿನ್ನ ಪ್ರಸಾದವನುಂಡು । ನಿನ್ನೊಲ್ಮೆಭಾಗವ ಕೊಂಡು ॥ ೨ ॥
ನಿನ್ನ ಮೂರುತಿಯ ನೋಡಿ । ನಿನ್ನ ಮುಂದೆ ನಲಿದಾಡಿ ।
ನಿನ್ನ ದಾಸರೊಡಗೂಡಿ । ನಿನ್ನಗುಣಂಗಳ ಪಾಡಿ ॥ ೩ ॥
ನಿನ್ನ ಕೂರ್ಮೆಗೆಡೆಯಾಗಿ । ನಿನ್ನವರಡಿಗೆ ಬಾಗಿ ।
ನಿನ್ನೊಲವಿದ್ದಂತೆ ಪೋಗಿ । ನಿನ್ನಾಳಿನಾಳಿನಾಳಾಗಿ ॥ ೪ ॥
ಚೆನ್ನಿಗ ಗೋಪಾಲರಾಯ । ಚಿಕ್ಕದೇವೇಂದ್ರವಿಧೇಯ ।
ಸನ್ನುತಮಂಗಳಕಾಯ । ಸಲಹಿದೆಂತೆನ್ನನು ಜೀಯ ॥ ೫ ॥ — ೩ —

ವಚನ ॥ ಇಂತು ತಾಂ ಪರಮಪುರುಷನ ಪಾದಾರವಿಂದಂಗಳಂ ನೆಱೆ ನಂಬಿ ನಲ್ಲನವನರಿಪಿದು ನಲ್ಪುವನೆಸಗಿ ಅವನೊಲವಂ ಪಡೆದು ಆನಂದದೊಳೋಲಾಡುತ್ತೆ ತನ್ನಂತೆ ಸಕಲಜನರುಂ ಸಂತಸಂಬಡೆಗೆಂದು ಮೇಲೆ ಮೂಱುಂ ಪದಂಗಳಿಂ ಪರೋಪದೇಶಂಗೆಯ್ವರ್. ಅದಱೊಳೀನಾಲ್ಕನೆಯ ತ್ರಿಪದಿಯೊಳೀಯಥಕಾರಿಯ ನಡತೆಗಳಂ ತಿಳಿಪಿ ಇಂತು ನುಡಿದವರ್ಗೆ ಸಿರಿ

ಯರಸನೊಲವಪ್ಪುದು ತಪ್ಪುದೆಂಬುವರ್ಕೆ ತನ್ನೊಲ್ಮೆಗಂ ಒಡನಾಟಕ್ಕಂ ಕೆಳೆಗಂ ಕೇಳಿಗಂ ನೆರವಿಗಂ ನೇಹಕ್ಕಂ ನಲ್ಮೆಗಂ ನಂಬುಗೆಗಂ ನೆಲೆವೀಡೆನಿಸಿ ನೆಗೞ್ತೆವೆತ್ತ ತಿರುಮಲಾರ್ಯರಂ ದೃಷ್ಟಾಂತಂಗೆಯ್ದು ದೃಢೀಕರಿಸಿ ತಮ್ಮ ಯದುಕುಲದೇೞ್ತರವನಾಳ್ಗೊಂಡ ಯಾದವಗಿರಿನಾರಾಯಣನಡಿದಾವರೆಗಳಂ ನಂಬಿ ಬಾೞ್ವೊಂದು ಪೇರ್ಗೂಪದೇಶಂಗುಡುವರ್.

॥ ರಾಗ—ಕಾಂಬೋಧಿ ॥ ಅಟ್ಟತಾಳ ॥

ಪಾದವ ಸೇರಿನಂಬಿ ಬದುಕಿರೊ । ನಮ್ಮ ಯಾದವನಾರಾಯಣನ ದಿವ್ಯಶ್ರೀ ॥ಪಲ್ಲವಿ॥

ಚ॥ ಹಿಂದಣ ನಡತೆಗೆ ಹೇಸಿರೊ ।
ಮುಂದೆ ನಿಂದೆ ಜಾರದವೊಲು ನೀಸಿರೊ ।
ನೀವಿಂದು ಮೊದಲು ಕುಲಕೋಟಿಗೆಯುಪ್ಪಂತೆ ।
ಒಂದೆ ದಿಟವ ಪಿಡಿದುತ್ತಮರೆನಿಸಿರೊ ॥ ೧ ॥
ನಿಮ್ಮ ನೆಲೆಯ ನೀವೆ ತಿಳಿಯಿರೊ ।
ತಿಳಿದೊಮ್ಮದ ನಡತೆಯನುಱಾಯಿರೊ ।
ಒಲುಹಮ್ಮುಹೆಮ್ಮೆಗಳನು ಹಱಿಯಿರೊ ।
ಸಜ್ಜನ ನಮ್ಮತವಪ್ಪಂತೆ ಸನ್ಮಾರ್ಗಪಿಡಿಯಿರೊ ॥ ೨ ॥
ಕರ್ಮದ ಬಱುಗಂಟ ಕಳೆಯಿರೊ ನಿಮ್ಮ ।
ದುರ್ಮತಿಧೂಳಿಯ ತೊಳೆಯಿರೊ ಮಿಗೆ ।
ನಿರ್ಮಲಚಿತ್ತದಿ ನೇಮವಿಡಿದು ನಮ್ಮ ।
ತಿರ್ಮಲಾರ್ಯರಂತೆ ಸ್ಥಿರವಾಗಿ ಬಾಱಿರೊ ॥ ೩ ॥ — ೪ —

ವಚನ॥ ಈ ಜನನಿಯು ಪಿಕಪದಿಯೊಳ್ ಮುಥಕಾರಿಗಳ್ಗೆ ನಗುವೆನಕಂಗಳೊಳಾವಶ್ಯಕಂಗಳಾದುವಂ ನಿರಪಿಸುವರ್.

॥ ರಾಗ—ಕಾಂಬೋಧಿ ॥ ಆದಿತಾಳ ॥

ಪಾದಂಗಳನೆ ನಂಬಿರೊ ದಿಟವಿಡಿದು। ಪಾದಂಗಳನೆ ನಂಬಿರೊ॥ (ಪಾದಂಗಳನೆ ನಂಬಿರೊ ಪಾದಂಗಳನೆ ನಂಬಿರೊ) ॥ ಪಲವ ಪಂಬಲಿಸದಿರಿರೊ । ಶ್ರೀದೇವಿಯರಸ ನಮ್ಮ ಯಾದವನಾರಾಯಣನ ॥ ಪಲ್ಲವಿ ॥

ಚ॥ ನಮ್ಮ ನಡತೆಗಳಿಂದ ನಾವು ಕಡೆವಾಯ್ವೆವೆಂಬ ।
ಹಮ್ಮ ಹಱಿದು ಬಿಸುಡಿರೊ । ಬಱಿಗೆಮ್ಮೆಗಳ ।
ನೆಮ್ಮಿನೆಲೆಗೆಡದಿರಿರೊ ಭಾರವಿಱುಹಿ ।
ಸುಮ್ಮನಿರ್ದು ಸೊಗವಡಿಯಿರೊ ಲೋಗರಿರಾ ॥ ೧॥ — ೫ —

ವಚನ || ಈ ತರುವಾಯ ಪಂಚಪದಿಯೊಳಧಿಕಾರಿಗಳ್ಗೆ ಪರಮ ಪುರುಷನನುಗೊಳಿಸುವ ಸಕಲಶ್ರೇಯಸ್ಸುಗಳಂ ನಿರವಿಸುವರ್.

|| ರಾಗ—ಟಾಜಿ || ತಾಳ ರೂಪಕ ||

ನಂಬು ನಂಬು ನಂಬು ನೆರೆ ನಂಬು । ನಂಬು ಶ್ರೀಕೃಷ್ಣಪದಾಂಬುಜಂಗಳ
ಹಂಬಲಿಸದಿರು ಹಲವನು || ಪಲ್ಲವಿ ||

ಚ|| ಕರಣದೋಷಂಗಳ ಕಳೆವನು । ಕಲ್ಮಷವನೆಲ್ಲ ತೊಳೆವನು ।
ಹಿರಿಯರ ಸಂಗತಿಗೆಳೆವನು । ಹೆತ್ತೆನೆಂದೇಳಿಗೆದಳೆವನು || ೧ ||

ಚಿಂತಣ ತಪ್ಪ ಮುಚ್ಚುವನು । ಜೋಡಿದುದನೆಲ್ಲ ಕಚ್ಚುವನು ।
ಅಂತರಂಗದೊಳು ಮೆಚ್ಚುವನು । ಆನಂದರಸವನೆಚ್ಚುವನು || ೨ ||

ಕರ್ಮದ ಬೇರ ಕಡಿವನು । ಕಾಲನ ಬಾಯ ಬಡಿವನು ।
ನಿರ್ಮಲಮತಿಯ ಕೊಡುವನು । ನೆವವಿಲ್ಲದಕ್ಕರವಡುವನು || ೩ ||

ಪುರುಳುಗೊಳಿಸಿ ಪೊರೆವನು । ಪೊಸಪೊಸಬೇಟದಿ ಬೆರೆವನು ।
ಎರೆಹೊರೆಯಿಲ್ಲದಿರುವನು । ಎಳೆದ ದಾರಿಗೆ ಬರುವನು || ೪ ||

ಚಿಕದೇವರಾಯನ ದೇವನು । ಸೇವಕಜನರ ಜೀವನು ।
ಸಕಲವಿಧದೊಳು ಕಾವನು । ಸರ್ವಾಭೀಷ್ಟವನೀವನು || ೫ || — ೬ —

ವಚನ || ಈ ಯೋಜನೆಯ ತ್ರಿಪದಿಯೊಳ್ ತಮಗಂ ತಮ್ಮ ಕೆಳೆಯರ್ಗಂ ಸರ್ವಾಭೀಷ್ಟಮಂ ಸಾಧಿಸುವುದಕ್ಕೆ ನಿಷ್ಠೆಯುಳ್ಳವರಾಗಿರ್ಪ ಶ್ರೀಕೃಷ್ಣನಡಿದಾವರೆಗಳಂ ಕೊಂಡಾಡುತ್ತಿರ್ಪ ಜೋಡಿಸುವರ್.

|| ರಾಗ—ಯದುಕುಲಕಾಂಬೋಧಿ || ಝಂಪೆತಾಳ ||

ಪಾದಪೆಟ್ಟಿಕೆ । ಪಾದಪೆಟ್ಟಿಕೆ ( ಪಾದಪೆಟ್ಟಿಕೆ )। ಶ್ರೀಪಾದಾವಧಾನ
ಗೋಪಾಲ ಚಿಕದೇವ ಚಿಕದೇವಭೂಪಾಲಪರಿಪಾಲ || ಪಲ್ಲವಿ ||

ಚ|| ಸಿರಿರಾಣಿಯೊಲವಿಂದ ಸೇರಿಯೊತ್ತುವ ಪಾದ ।
ಪುರುಳೆನಿಸಿ ವೇದದೊಳು ಪೊಳೆವ ಪಾದ ।
ಸರಸಿಜಧ್ವಜಶಂಖಚಕ್ರಲಾಂಛಿತಪಾದ ।
ಪರಮಯೋಗೀಶ್ವರರು ಭಾವಿಸುವ ಪಾದ || ೧ ||

ಅವನಿಯಾಕಾಶಗಳನಳೆದು ಮೆರೆದ ಪಾದ ।
ದಿವಿಜನದಿಯನು ಪಡೆದ ದಿವ್ಯಪಾದ ।
ಶಿವನ ಪಾವನಗೊಳ್ಳು ಶಿವನೆನಿಸಿದೀಪಾದ ।
ಕವಿದು ಕಲ್ಲಿಗೆ ಜೀವಕಳೆಯಿತ್ತ ಪಾದ || ೨ ||

ನಡೆದು ಕುರುದೂತ್ಯದೊಳು ಬಣ್ಣವೇರಿದ ಪಾದ ।
ಪರಿಪರಿಯ ಭಯವ ಪರಿಹರಿಪ ಪಾದ ।
ತಿರುಮಲಾರ್ಯರಿಗೆ ಕುಲದೇವರೆನಿಸಿದ ಪಾದ ।
ನರಪತಿಗೆ ತರತರದಿ ನಲಿವೀವ ಪಾದ ॥ ೭ ॥ — ೮ —

ನಂಬುಗೆಯ ಸಪ್ತಪದಿ ಸಂಪೂರ್ಣಂ.



— ಸಪ್ತಪದಿ — III —

ವನಜಾಕ್ಷಂ ಕಣೆಯಾದುದಿಂ ತ್ರಿಜಗ ಬಿಲ್ಲಾಳೆಂದದಿಂ ಪಂಕಜಾ ।
ಸನನುಂ ಸಾರಥಿಯಾದುದಿಂ ತ್ರಿಪುರಮಂ ದಾಳಿಟ್ಟ ರಾಮಾವರೆಂ
ದೆನಿಸಿರ್ದೀಕ್ಷಿಕನೀವನೊರ್ವನದಟಿಂದಂ ತೂಳ್ದಪಂ ಚಕ್ರಿಸ್ಸರಾ
ಯನ ಮಾರ್ಗಂ ಮಿಡಿತಿಗೇರಿ ಮದ್ದಗಿರಿಯೊಂದೀಮುಕ್ರೋಡಲಿಂಗಕಮಂ ॥

ಪರಿವಿಪಮೆಚ್ಚ ಮದ್ದಗಿರಿದುರ್ಗದ ಕೋಂಟೆ ಸುರಂಗದಿಂದವಾ ।
ಪುರದವರತ್ತಲಿತ್ತಲಡರುತ್ತಿರೆ ವಿಕ್ರಮ ಸವಿನಾದವತ್ಯದೊಳ್
ಧರೆಯುವರಂದಿಸಿಂದವರನೀ ಗಗನೇಚರರಂಬರಲ್ತಿ ಮೋದ್ ।
ಪರಿಪರಿಯಿಂತು ಟಿಪ್ರತಿಯ ಕೇಳ್ ದಿನವಲ್ಲಿ ಯೋಗಕೆಯಿಲ್ಲದೇ

ವಚನ॥ ಪೂರ್ವಸಪ್ತಪದಿಯೊಳ್ ಶ್ರೀಮನ್ನಾರಾಯಣನ ಚರಣಂಗಳ್ ಮೋಕ್ಷೋಪಾಯಮೆಂಬುದಂ ಪ್ರಕಾಶವಾಗಿ ಪೇಳ್ದರ್. ಈ ಮೂರನೆಯ ಸಪ್ತಪದಿಯೊಳ್ ಯಥಾರ್ಥಮೆನಿಸುವ ಪ್ರಸಂಗವೆಂತೆ ಕಾಮುಕ ವ್ಯಾಪಾರಮುಂ ನೆಪಂಗೆಯ್ದು ಅನ್ಯಾಪದೇಶದಿಂ ಪ್ರಥೆಗೊಳಿಸುವರ್. ಅದೆಂತೊಳೊಡೆಯನ ತ್ರಿಪದಿಯೊಳ್ ಶ್ರೀಕೃಷ್ಣನ ರೂಪಾತಿಶಯಕ್ಕಂ ಕಲ್ಯಾಣ ಗುಣಂಗಳ್ಗಂ ಮನಂ ಸೋಲ್ವನ್ನಂ ಬಯಸಿದ ತಮ್ಮ ಕಣ್ಗಳ ನೆರೆಗಾತರಂಗದೊಳ್ ನಾತನಂದಳೆದು ಬಹಿರಂಗದೊಳ್ ತಾಮದಕ್ಕೊಡಂಬಡದಂತಿರ್ದ ಅನಳ ಪ್ರೇಮಮಂ ಸೆರ್ಜಿಸಿಯವನೊಲವಂ ಪಡೆದ ವಡತೆಗಳಂ ತಿಳಿಪುವ ವೃದ್ಧಗೋಪಿಯರ ನುಡಿಗಳಂ ನೆಪಂಗೆಯ್ದು ಅನ್ಯಾಪದೇಶದಿಂದಿವರುಂ. ಶ್ರೀಮನ್ನಾರಾಯಣನ ಗುಣಾತಿಶಯಮಂ ಕೇಳ್ದು ತಿಳಿದು ವೈಷ್ಣವರೆನಿಸಿ ಬಾಳಲೆಳಸಿದ ಲೋಗರ ನೆಲೆಗಾಸಂಬಡೆದಿವರ್ಗೆ ವೈಷ್ಣವಾಚಾರಮಂ ಪದೇಶಿಸೆನೆಂದು ಪೂರ್ಣ್ದ ಪ್ರೋತ್ಸಾಹಗಳ್ಗೆ ಪುನ್ನಸ್ಯವೃತ್ತಿಯನನುಭವಿಸುತ್ತಿಂತು

ಸಜ್ಜನವರ್ಗೆ ಸ್ವಾಮಿಯೊಲವಪ್ಪುದಾದೊಡಂ ಈ ನಡತೆಯರಿವುದರಿಂ ಪುಸ ಮಂ ಬಿಟ್ಟಿಡಿದು ತನ್ನಡಿ ನಡೆಯುವೇಳ್ಕುಮೆಂದು ಪೇಳ್ದರ್.

॥ ರಾಗ—ಕಾಂಬೋಧಿ ॥ ಆದಿತಾಳ ॥

ಇಂದಿರೇಶನೊಡನಾಟವೆಮ್ಮ ಹವಗೆ। ಎನ್ನ ಕಂದ ಕೇಳವನನೇಸ್ತ (?) ಕಡು
ಗಧಾರೆಯು ನಟಣ ॥ ಪಲ್ಲವಿ ॥

ಚ ॥ ತನುವಿಗೆ ಹಿತವೆನಿಪ ತವಕಿಗರೊಡನಾಡದೆ ।
ಮನವಾರತೆಯೊಳು ನಿನಗೆ ಮನವ ನಿಲ್ಲಿಸದೆ ।
ಜನನಿಜನಕಾದಿಯಾದ ಜನ್ಮಬಂಧುತೆಯು ತೊರೆದು ।
ಅನಿತರಭಕ್ತಿಯೊಳಿರೆ ಅಂದಿಗೊಲಿವನು ಗಡ ॥ ೧ ॥
ಎನಗುವೆನೆಲ್ಲವನೆಂದು ಹೆಕ್ಕಳದೊಳೆನಗದೆ ।
ಎನಗಳಾಜನೆಂದು ನಿನಗೆ ಹಿಂದೆ ಸಾರದೆ ।
ಎನಗುವ ಸೇವೆಯುನೆನಗೆಮೆನಕವಿದೆನ್ನದಲ್ಲೆಂದು ।
ಹನಗೆಡದಂತೆಪ್ರೊಲಿರೆ ಅಂದಿಗೊಲಿವನು ಗಡ ॥ ೨ ॥
ಪರಿಪರಿ ಲೋಗರವೋಲು ಪಲಭೋಗವ ಬಯಸದೆ ।
ತರವಳಿಯು ತನ್ನ ಸ್ವಾತಂತ್ರ್ಯವನೆಣಿಸದೆ ।
ತಿರುಮಳಿಯಾರ್ಯಾದಿ ದಿವ್ಯದೇಶಿಕರಾಣತಿವಿಡಿದು ।
ಅರವುಜನೆಂಬಿಲ್ಲದಂತಿರೆ ಅಂದಿಗೊಲಿವನು ಗಡ ॥ ೩ ॥ — ೧ —

ವಚನ । ಈ ಎರಡನೆಯ ತ್ರಿಪದಿಯೊಳ್ ಸಕಲಚೇತನರಂ ರಕ್ಷಿಪೆನೆಂದಿರ್ಪ ಶ್ರೀಮನ್ನಾರಾಯಣನವರ ನಡತೆಯೊಳ್ ಸುಕೃತನೆಂದು ಪೆಸರಿಪಲ್ಲಕ್ಷ್ಯವೆಂದು ಯಾದೃಚ್ಛಿಕಪ್ರಾಸಂಗಿಕವಾದ ನಡತೆಯುಂ ನೆವಂಗೆಯ್ದು ಇವರ್ಗೆ ತನ್ನೊಳ್ ಪ್ರೇಮಾಭಿಮುಖ್ಯಮಂ ಬಳೆಯಿಸಿ ಮುಕ್ತಿಪರ್ಯಂತವಾಗಿ ನಯೆಗೆಯ್ವನೆಂಬರ್ಥಮಂ ತನ್ನ ಪೆಣ್ಗಳಂ ಮರುಳ್ಗೊಳಿಸಿ ವಶಕ್ಕೆಗೊಂಡ ಶ್ರೀಕೃಷ್ಣನಂ ಮಾಜುವ ವೃದ್ಧಗೋಪಿಯರ ವಚನವ್ಯಾಜದಿಂ ವಿವರಿಸುವರ್.

॥ ರಾಗ—ಭೈರವಿ ॥ ತಾಳ ಝಂಪೆ ॥

ಪಾಯುಕಾಣಿಗೆ ಮಗಳು ಮಾಜುವೋದಳಕಟ ।
ಬಾಯಿ ಮಾತಿಗೆ ನುಡಿದು ಬಂದಿಗೆಯ್ಯದೆ ಬಿಡನು ॥ ಪಲ್ಲವಿ ॥

ಚ ॥ ನೆನೆದೊಡನೆ ಮನದೊಳಗೆ ನೆಲಸಿ ಮುನ್ನಿನ ಕೆಲವು ।
ನೆನಹುಗಳನೆಲ್ಲವನು ನೀಕರಿಸುತ ।
ದಿನದಿನಕೆ ತನ್ನಡಿಯ ಸೇವೆಯೊಳು ತವಕವನು ।
ಕೊನರುಗೊಳಿಸುತ ಕೊಂದುಕೂಗಿಸದೆ ಬಿಡನು ॥ ೧ ॥

ಪಱೆಯುರೊಡನಾಡಿಸುತ ಪಲವಗೆಯ ಬೋಧನೆಯ ।
ಬಳೆಯಿಸುತ ಪದವಱಿತು ಬಸಗೆಯ್ಯುತ ।
ಬಱಿಕ ವಿರಹಾಗ್ನಿಯನು ಪರ್ಬಿಸುತ ಮನದಳವ ।
ಪಿಱಿಪಿಱಿದು ಪೇಗದೊಳು ಹಿಪ್ಪೆಗೆಯ್ಯದೆ ಬಿಡನು ॥ ೨ ॥

ಪರಿಪರಿಯ ಭವಸುಖವ ಬಯಲೆನಿಸಿ ಸ್ವಾತಂತ್ರ್ಯ ।
ದಿರವ ತೊಲಗಿಸಿ ತನ್ನೊಳೇಕವೆನಿಸಿ ।
ತಿರುಮಲಾರ್ಯಾದಿ ವರದೇಶಿಕರ ಮತದಿ ಪರಿ ।
ಚರಣದೊಳು ತಣ್ಣನೇ ತಣಿಯಿಸದೆ ಬಿಡನು ॥ ೩ ॥ — ೩ —

ವಚನ|| ಈ ಮೂಱನೆಯ ದ್ವಿಪದಿಯೊಳ್ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಂಗಳ್ ಮೊದಲಾದ ಮೋಕ್ಷೋಪಾಯಂಗಳನಾಚರಿಸುವರ್ ತಮ್ಮಂತೆ ತಿಳಿವುಂ ಸಶಕ್ತಿಯುಮಿಲ್ಲದೆ ಬಱಿದೆ ಪ್ರಸನ್ನರಪ್ಪವರ್ಗೆ ಸಕಲ ಸಾಂಸಾರಿಕದುಃಖನಿವೃತ್ತಿರೂಪನಪ್ಪ ಮೋಕ್ಷಾನಂದಂ ಬರ್ಪ ತೆಱನಾವು ದೆಂದಾಕ್ಷೇಪಿಸಿ ಪ್ರಸನ್ನರ್ಗೆ ಮೋಕ್ಷೋಪಾಯನಪ್ಪ ಶ್ರೀಮನ್ನಾರಾಯ ಣನೆ ತನ್ನ ಜ್ಞಾನಶಕ್ತ್ಯಾದಿಗುಣಂಗಳಿಂದಾ ಪ್ರಸನ್ನರ್ಗೆ ಸಕಲಸಾಂಸಾರಿಕ ದುಃಖಂಗಳಂ ಕಳೆದು ಮೋಕ್ಷಾನಂದಮನನುಗ್ರಹಿಸುವನೆಂಬ ಪರಿಹಾರ ಮಂ ತಾತನ್ನ ಗುಣಂಗಳಿಂ ಬೆಱೆತು ಮಾಳ್ಪ ಮುಗ್ಧೆ ಸವತಿಯರಂ ಕೂರ್ತು ಶ್ರೀಕೃಷ್ಣನಂ ನೆರೆನಂಬಿಯುಮನನೊಲಿಸಂ ಪಡೆವ ಗೋಪಿಯೊರ್ವಳ್ ನುಡಿ ವ ನುಡಿಯುಂ ನೆಪಂಗೆಯ್ದು ವ್ಯಕ್ತೀಕರಿಸುವರ್.

॥ ರಾಗ—ಕಾಂಬೋಧಿ ॥ ಅಷ್ಟತಾಳ ॥

ಎನ್ನ ದೋಷಂಗಳನೆಣಿಸಿ ನೋಯದಿರಿ ನೀವೆನ್ನಾಳ್ದ ಚಿಕದೇವೇಂದ್ರ ಗೋ
ಪಾಲಕನುನ್ನತಿಯನು ನೆನೆದೆನ್ನೊಳ್ ಗೊಡಬಡಿ ॥ ಪಲ್ಲವಿ ॥

ಚ॥ ಗುಣವಿರೆ ಕೂರ್ಪರು ಕೂರ್ತೆಡೆಯೊಳು ಮಿಗೆ ಗುಣಗಣಗಳನನುಗೊಳಿಪರು
ಮಿರವೆ । ಗುಣಕೆ ಕೂರ್ತನು ನಿಮ್ಮ ಕೂರ್ಮೆಯಿಂದೆನ್ನೊಳು ಗುಣವನೆಣಿಪ
ನಿಲ್ಲಿ ಕೋಪವೇತಕೆ ನಿಮಗೆ ॥ ೧ ॥

ಗುಣ ಪಿರಿದಾಗೆ ದುರ್ಗುಣವ ಮುಟ್ಟುವುದವಗುಣ ಪಿರಿದಾಗೆ ಸದ್ಗುಣವ
ಮುಟ್ಟುವುದು । ಗುಣಿಗಳರಸನ ಸದ್ಗುಣಂಗಳೆನ್ನಯ ದುರ್ಗುಣವ ಮುಟ್ಟಿದು
ನಿಲ್ಲಿ ಕೋಪವೇತಕೆ ನಿಮಗೆ ॥ ೨ ॥ — ೩ —

ವಚನ|| ಈ ನಾಲ್ಕನೆಯ ತ್ರಿಪದಿಯೊಳ್ ಮೂಱನೆಯದ್ವಿಪದಿಯೊಳ್ ಪೇೞ್ದರ್ಥಮುಂ ಮೂಱುಂ ದೃಷ್ಟಾಂತಂಗೆಯ್ದು ತೋಱಿ ದೃಢೀಕರಿಸುವರ್.

॥ ರಾಗ— ಖಾಪಿ ॥ ಅಟ್ಟತಾಳ ॥

ಆಱುತು ಆಱಿಯರೆನ್ನ ಕ್ಕತಂಗಿಯರು। (ಆಱುತು ಆಱಿಯರೆನ್ನ ಕ್ಕತಂಗಿಯರು)। ಎನ್ನೆಱೆಯ ಶ್ರೀ ಚಿಕದೇವೇಂದ್ರನೆನ್ನಲ್ಲಿ ಕುಱುಪುಗೊಳುವೊಡೊಂದು ಗುಣಮಿಲ್ಲದಿರ್ದೊಡೆ। ಎಱಕದೊಳಿರೆ ನೋಡಿಯಾಪರಿ ಮಱುಗುವ ॥ಪಲ್ಲವಿ॥

(ವಚನ ॥ ಈ ಪಲ್ಲವಿಯೊಳ್ ಚಿಕದೇವೇಂದ್ರ ಎಂಬುದಱೊಳ್ ಚಿಕದೇವನೆಂದು ವಿನಯದಿಂ ತಮ್ಮಂ ಪೆಸಗೊಂಡು ಇಂದ್ರನೆಂಬುದಱಿಂ ತಮಗಾಳ್ದನಪ್ಪ ಶ್ರೀಕೃಷ್ಣನಂ ಪೇೞ್ವರ್.)

ಚ ॥ ಸೊಬಗಿಯೆ ಸುಗುಣೆಯೆ ಸೊಗಸುಗಾತಿಯೆ ಪೇೞ। ಶಿವಳಿಗೇತಕೆ ಹೆಮ್ಮೆಯಿಂದಱಲುವರು। ಕುಬುಜೆಗೊಲಿದು ಮೆಯ್ಯ ಕೊಂಕುಗಳನು ತಿದ್ದಿ। ಸೊಬಗಿಯೆನಿಸಿಯಾಳ್ದ ಸುಗುಣಗೋವಳನಂತೆಂದು ॥೧॥

ಸರಸಿಯೆ ಚದುರೆಯೆ ಚೆಲ್ವಗಾತಿಯೆ ಈ। ಪರಿಪೋೞ್ಗಿಯೇಕೆಂದು ಬಣ್ಣಗುಂದುವರು। ಕರಡಿಪೆಣ್ಣನು ಪಟ್ಟದರಸಿಯುತೊಳು ಸರಿ। ಪೆರಸಿಯಾಳಿದ ಸಿರಿಯರಸಗೋವಳನಂತೆಂದು ॥೨॥

ತಲೆನೆಲೆಯುಱುತೊಲಗವನೆಸಗುವರೇಱಾ। ಯಲಸಿಂತೇತಕೆಂದಳವುಗುಂದುವರು। ಪೊಲಬಱಿಯದ ಗೋಪಾಲನೆಯರಿಗೆ ಬಾಗ್ಮಿ। ಗಲಿಸಿಯಾಳಿದ ಪೆಂಪುಗಾಱ ಗೋವಳನಂತೆಂದು ॥೩॥

— ೩ —

ವಚನ ॥ ಉಪಾಯಾಂತರವಿಪ್ರತಿಪರ್ ಪ್ರಸನ್ನರಂ ನಿಂದಿಸಿದೊಡಂ ಅವರ್ಗೆ ತಮಿಪಸಾಪಗುಣಂಗಳ್ ಉಂಟಾಗಿರ್ಪುದಱಿಂ ನಿಂದಕರೊಳ್ ಕೋಪಂ ಪುಟ್ಟದು: ಮತ್ತಂ "ಎಮ್ಮಾಳ್ದನಂ ದೋಷಮುಪ್ಪುದಱಿಂದೈಸೆ ನಿಂದಿಪರ್. ಅದಱಿಂದಾದೋಷಮಂ ಪರಿಹರಿಪುದು" ಎಂದು ಸ್ವಾಮಿಗೆ ಬಿನ್ನವಿಸುವರ್. ಈಯರ್ಥಮನಿವರುಂ ಈಪದನೆಯ ತ್ರಿಪದಿಯೊಳ್ ತಿಳಿಪುವರ್.

॥ ರಾಗ—ಮುಖಾರಿ ॥ ಅಟ್ಟತಾಳ ॥

ನಿಂದೆಗೆಯ್ವರು ಮಿಗೆ ನಿಂದಿಸುತಿರಲಿ ॥ ಪಲ್ಲವಿ ॥

ಚ ॥ ನಿಂದೆಗೆಯ್ವರು ಮಿಗೆ ನಿಂದಿಸಲೆಮಗದ। ಱಿಂದ ಕೊಱತೆಯಾವುದದಕೆ ಬಿನ್ನವಿಸೆನು। ನಂದಕಾಯುಧ ನಿನ್ನ ಸಲ್ಲಡಿಗಮರಿಸಿ। ದಂದುಗಂಬೊಳು ಕಡೆಂಗೊಂದಿರೆ ಚಿತ್ತಕೆ। ಬಂದ ಪರಿಯೊಳದ ಬಣ್ಣಿಗೆಯ್ವುದು ಲೇಸು ॥೧॥

ಪೊಲ್ಲದ ನುಡಿಗಳ ಸೊಲ್ಲಿಸುತಿರಲಿ ॥ ಪಲ್ಲವಿ ॥

ಚ ॥ ಪೊಲ್ಲದ ನುಡಿಗಳ ಸೊಲ್ಲಿಸುತಿರ್ದೊಡ। ಮಿಲ್ಲಪೆಮಗೆ ಹೀನವದಕೆ ಬಿನ್ನವಿ

ನೆಸು । ಬಲ್ಲರ ಬಲ್ಲಹ ಪಾವನವಹ ನಿನ್ನ । ಮೆಲ್ಲಡಿದಳದೊಳು ಮಿನುಗುವ ರೇಖೆ। ಗಳಲ್ಲಿ ಧೂಳಿರೆ ತೊಡೆದನುಗೆಯ್ವುದು ಲೇಸು ॥ ೨॥

ಬೈದೊಡೆ ಬೈದರ ಬಾಯಿ ನೊಂದಪುದು ॥ ಪಲ್ಲವಿ ॥

ಚ॥ ಬೈದೊಡೆ ಬೈದರ ಬಾಯಿ ನೊಂದಪುದೆಮ । ಗಾದ ಕೊರತೆಯಾವುದ ದಕೆ ಚಿನ್ನವಿಸೆನು , ಯಾದವನಾರಾಯಣ ನಿನ್ನ ( ದಿವ್ಯ ) ಶ್ರೀ । ಪಾದ ಸೋಂಕಿದ ರನ್ನಪಾವುಗೆ ಮಾಸಿರೆ । ಆದರದಿಂದದನನುಗೆಯ್ವುದು ಲೇಸು ॥ ೩ ॥

ವಚನ ॥ ಈಕೀರ್ತನೆಯು ತ್ರಿಪದಿಯೊಳ್ ಜ್ಞಾನಿಗಳ್ಗೆ ಭಯಂ ಪುಟ್ಟುವುದರ್ಕಂ ಪುಟ್ಟುವ ಭಯಂ ಪರಿಹಾರಮಪ್ಪುದರ್ಕಂ ಕಾರಣಂಗಳಂ ಪಿರವಿಸುವರ್.

॥ ರಾಗ—ಕಾಂಬೋಧಿ ॥ ತಾಳ ತ್ರಿಪುಡೆ ॥

ತನ್ನ ನೆನೆವುದು ಜೀವ ತಲ್ಲಣಿಪುದು । ಕೂಡೆ ನಿನ್ನ ನೆನೆವುದೊಯ್ಯನೆ ನೆಲೆಗೆ
ನಿಲ್ಲುವುದು ॥ ಪಲ್ಲವಿ ॥

ಚ॥ ಪುದಿದ ಕೋಪಲು ಕಂಡ ಮದುಕಲುಸರಗಳಂ ।
ದೊದಪಿದೊಡಲ ನೆನೆದೊಱಲುವುದು ।
ಹೃದಯಮಧ್ಯದಿ ನಿಂತು ಹಿತವನೆಸಗುವ ನಿನ್ನ ।
ನೆರ್ದೆಗೊಳಿಸುತೊಯ್ಯನೆ ಹೆಕ್ಕಳಿಸುವುದು ॥ ೧ ॥

ಉಲಿಸೊಂಕುಸಪಿರೂಪೊಳುಗಂಪಗೆಱಗುವ ।
ಪಲವು ಕರಣಗಳಲೆಗಲಿಸುವುದು ।
ಸಲುವ ವಿಷಯ ನಿನ್ನ ಚರಣಕರ್ಪಿತಮೆಂಬ ।
ನೆಲೆಯ ತಿಳಿದೊಡನೆ ನಲವೇಱುವುದು ॥ ೨ ॥

ಮರಳಿ ಮರಳಿ ತಾನು ಮಾಡುವ ಪಾಪಂಗಳ ।
ಬೆಱಬ ನೆನೆದು ಮಿಗೆ ಬೆದಱುವುದು ।
ನರಪತಿ ಯದುಕುಲನಾಥ ಶ್ರೀರೇಶ ನೀ ।
ನೋಡಿದೊಂದು ನುಡಿಯನಿತರ್ಜಿ ಕೊಬರ್ವುದು ॥ ೩ ॥ — ೬ —

ವಚನ ॥ ಇಂತು ನಿರ್ಘಾಪಮಪೊಕರ್ಪ ತಮ್ಮ ಮನೋರಥಂಗಳ ನಿರ್ಯೋಜನೆಯು ತ್ರಿಪದಿಯೊಳ್ ಪಿರಪಿಸುವರ್.

॥ ರಾಗ—ಕಾಂಬೋಧಿ ॥ ಅಟ್ಟತಾಳ ॥

ಜನಿರಿಂಬಿನಗೆಂದಿಗಪ್ಪುದೊ । ನಿನ್ನ ದಾಸಾನುದಾಸರ ದಾಸನೆನಿಪುದೊಂದ್ಯೈ ॥
॥ ಪಲ್ಲವಿ ॥

ಸುಲಭನೆಂಬುದಂ ಪೇಳ್ದು ದೃಢೀಕರಿಸುವರ್. ಅದಱಿಂದೀ ಮೊದಲ ಪಂಚಪದಿಯೊಳ್ ಸ್ವಾಮಿಯ ಸ್ವರೂಪರೂಪಗುಣವಿಭವಾದಿಗಳನಿತುಮಂ ಭಾವಿಸಿ ತಿಳಿವ ಉಪಾಯಾಂತರನಿಷ್ಠೆಯರಿದಾದೊಡಮವನಾಳ್ದನುಂ ತಾನಾಳು ವೆಂದು ತಿಳಿದು ಪ್ರೀತಿಗೊಂಡಿರ್ಪ ಪ್ರಸತ್ತಿನಿಷ್ಠೆ ಸುಲಭಮೆಂಬುದಂ ತಿಳಿಪುವರ್.

॥ ರಾಗ—ಯದುಕುಲಕಾಂಬೋಧಿ ॥ ತಾಳ—ಝಂಪೆ ॥

ನಿನ್ನ ನೆಲೆಯಱಿಯಲೆನ್ನಳವೆ । ನೀ । ನೆನ್ನನಿಯನೆನ್ನಾಳ್ದನೆಂಬನಿತಲ್ಲದೆ ॥ ಪಲ್ಲವಿ ॥

ಚ ॥ ಅಱಿಯರು ಗಡನಂತನೆಂಬವರು ।
ನಿನ್ನನಱಿವರು ಗಡನುಪಮನೆಂಬರು ।
ಈಱುಱಿತಱಿಯದಿರ್ಪ ಪೊಸಕೆಱಸ ನೀನೆ ಬಲ್ಲೆ ॥ ೧

ಕಿಱಿಯ ಗಡ ಕಿಱಿಯರೊಳಗೆಲ್ಲ ।
ನೀನು ಪಿರಿಯ ಗಡ ಪಿರಿಯರೊಳಗೆಲ್ಲ ।
ಈ ಕಿಱುಪಿರಿಯತನದೊಂದು ಕೀಲ ನೀನೆ ಬಲ್ಲೆ ॥ ೨

ಇಂತಿರ್ಪನೆನಸಲ್ಲದು ಗಡ ।
ನೀನಿಂತಲ್ಲವೆನಸಲ್ಲದು ಗಡ ।
ಪೋಣಿಂತಪ್ಪುದಿಂತಲ್ಲವೆಂಬುದನು ನೀನೆ ಬಲ್ಲೆ ॥ ೩

ಎಲ್ಲರೊಳಗಿರ್ಪ ಗಡ ನೀನು ।
ನಿನ್ನೊಳೆಲ್ಲ ಜಗಮಿರ್ಪುದು ಗಡೇನು ।
ಇಂತೆಲ್ಲರೊಳು ನೀ ನಿನ್ನೊಳೆಲ್ಲವಿದ ನೀ ಬಲ್ಲೆ ॥ ೪

ಸುರರಿಗೆಲ್ಲರಿಗೊಡೆಯನು ಗಡ ।
ನೀ ಸರಸ ಕೆಯ್ಯಾಳೆನಿಸಿದೆ ಗಡ ।
ಸ್ವಾಮಿ ತಿರುಮಲಾರ್ಯರಿಗೊಲಿದ ದೇವ ನೀನೆ ಬಲ್ಲೆ ॥ ೫ — ೧ —

ವಚನ ॥ ಈಯೆರಡನೆಯ ತ್ರಿಪದಿಯೊಳ್ ಸರ್ವೇಶ್ವರಂ ಕರ್ಮಯೋಗಾದಿನಿಷ್ಠರಂ ಪೊರೆವೆಡೆಯೊಳವರವರ ಕರ್ಮಾನುಗುಣವಾಗಿ ನಡೆಸವೇಱ್ಕೆಂಬ ನೀತಿಗೊಳಗಾಗದೊಡಂ ಪ್ರಪನ್ನರ ವಿಷಯದೊಳ್ ಕೃಪಾಪರವಶನಾಗಿ ನೀತಿಯುಂ ಮೀಱ್ದು ಸಲಹುವನೆಂಬುದಂ ನಿರವಿಸುವರ್.

॥ ರಾಗ—ಕಾಂಬೋಧಿ ॥ ಅಟ್ಟತಾಳ ॥

ನೀತಿಯಾವುದು ನಿನಗೆ । ಭಾವಿಸೆಯುಪನೀತಿಯಾವುದು ನಿನಗೆ ॥

ನೀತಿಯಾವುದು ಕೃಷ್ಣ ನಿನಗೆ ನಿನ್ನವನೆಂದೋತು ಪಾಲಿಪುದೆನ್ನನುಚಿದ ಮಾತುಗಳೇಕೆ ॥ ಪಲ್ಲವಿ ॥

ಚ॥ ನಡೆಯುತಕ್ಕುದಲ್ಲದ ಮರ್ತ್ಯರೋರ್ವರು ನುಡಿಯುತಕ್ಕುದಲ್ಲದ। ದುಡುಕಿನೊಳೆಸಗುವ ದುರುಳುತನದ ಕಿಡುನಡತೆಗಳೆಲ್ಲವು ನಲವೆನಿಸುತಲಿದೆ ॥ ೧

ಪಡೆಬಲವನಾರಯ್ಯದೆ ಹಿಂದುಮುಂದೆಣಿಸಿ ಹಿಂಗಕೆ ಸಾರದೆ। ಒಡಲು ಪಡೆದು ನೀನುಸಿರ್ದ ಪೂಯಸ್ಮಾತುಗಳೊಡನೆ ವೇದಂಗಳನೊಂದುವೆರಸುತಿದೆ ॥ ೨

ಪುರುಷಪಶುಗಳೆನಿಪ ಗೊಲ್ಲರೊಳೊಡವೆರೆದು ಜಾಱುವ ನಿನ್ನನು। ಪರಮರಕ್ಷಕನೆಂದು ಭಜಿಸಿ ಭಾವಿಸುವರು ತಿರುಮಲೆಯಾರ್ಯಾದಿದೇಶಿಕರೆಂದನೆ ॥ ೩

ವಚನ। ಈ ಮಾಲಿಕೆಯು ತ್ರಿಪದಿಯೊಳ್ ಅರ್ಜುನಂಗೆ ಸಾರಥಿಯುಂ ಗೋಪಿಯರ್ಗೆ ವಲ್ಲಭನುಂ ಪಾಂಡವರ್ಗೆ ಮಾತುಲಸುತನಾದುದಂ ನಿದರ್ಶನಂಗೆಯ್ದು ಭಕ್ತಿವಿಷಯದೊಳ್ ಭಕ್ತಪರವಶನಾಗಿ। ಸ್ತ್ರೀಯರ್। ವಿಪ್ರರ್ ಸಲುಪುವನೆಂಬುದಂ ಸ್ಥಿರೀಕರಿಸಿದರ್.

॥ ರಾಗ—ಕಾಂಬೋಧಿ ॥ ಝಂಪೆತಾಳ ॥

ಉತ್ತರೆಯ ಸಿಸುವಿಗುಸಿರಿತ್ತ ಪಾದಕೆರಗುವೆ। ನಿನ್ನ ಸತ್ಯಬ್ರಹ್ಮಚರ್ಯಪ್ರಭುತನಗಳೆಂತಿರಲಿ ॥ ಪಲ್ಲವಿ ॥

ಚ॥ ಕಡುಗಕ್ಕೈದುಗಳೊಂದ ಹಿಡಿಯೆನೆಂದಿರ್ದು ಕೈ।
ಹಿಡಿದ ಫಲುಗುಣನು ಕೈಗಿಡಲು ಕಂಡು ॥
ಕಡುಗಿ ಭೀಷ್ಮನ ಶಿರವ ಕಡಿವ ತವಕದಿ ಚಕ್ರ।
ಹಿಡಿದ ಸತ್ಯವ ಲೋಕವೆಲ್ಲರರಿಯದುದೆ ॥ ೧

ಕೊಳಲೂದಿ ಜಗವ ಮರುಳ್ಗೊಳಿಸಿ ಯಮುನೆಯ ತಡಿಯ।
ಪುಳಿನವನದೆಡೆಯ ಪೂಪೊದರುಗಳಲಿ।
ಎಳೆಯ ಗೋವಳತಿಯರ ನಳಿತೋಳ ತಕ್ಕೈಬಿಗು।
ಹಿಡಿಯುದಿಹ ಬ್ರಹ್ಮಚರ್ಯವೆಲ್ಲರರಿಯದುದೆ ॥ ೨

ದೊರೆತನದ ಮೋಡಿಯಲಿ ಕರೆದು ಧರ್ಮಜ ನಿನ್ನ।
ಭರದಿ ನಡೆ ಕೌರವನ ಬಳಿಗೆನ್ನಲು।
ಶಿರದೊಳಾಜ್ಞೆಯ ಧರಿಸಿ ತೆರಳ್ದ ಪಕ್ಷಿತುರಂಗ।
ದೆಸೆಯ ನಿನ್ನರಸುತನವಾರುಮರಿಯದುದೆ ॥ ೩

—೩—

ವಚನ || ಈ ನಾಲ್ಕನೆಯ ಸಂಕೀರ್ತನದೊಳ್ ಪ್ರಸನ್ನರ್ ಭಗವತ್ಪರತಂತ್ರರಾಗಿ ಸ್ವಬುದ್ಧಿಯುಂ ಸ್ವಪ್ರಯತ್ನಮುಮಿಲ್ಲದೆ ವಿಕಲಕರಣರಂತೆಯುಂ ಅಚೇತನರಂತೆಯುಮಿರ್ಪ್ಪವರ್ಗಳಿವರಂ ಕಾಪಿಡದಿರ್ದೊಡೆ ತನಗೂಣೆಯುಂ ಬರ್ಪ್ಪುದೆಂದು ತಾನೇ ಕಾಪಿಡುವನೆಂಬುದಂ ನಿರೂಪಿಸುವರ್.

|| ರಾಗ—ಶಂಕರಾಭರಣ || ಅಟ್ಟತಾಳ ||

ತಪ್ಪದಾರದು। ತಿಳಿದು ನೋಡೆ ತಪ್ಪದಾರದು। ತಪ್ಪುನೆಪ್ಪುಗಳ ನಿರ್ಣೈಸದೆಲ್ಲವ।
ನೊಪ್ಪುಗೊಳ್ಳೆನ್ನನೊಲಿದು ಪಾಲಿಸು ಕೃಷ್ಣ || ಪಲ್ಲವಿ ||

ಚ || ಆರಯ್ಯ ಮುಗ್ಗರಿಪಂಥನ ತಪ್ಪೋ।
ದಾಟಿದೋಡುವ ದಂಡಧಾರನ ತಪ್ಪೋ।
ಮೇರೆಯಮೀರಿದೆನ್ನ ಮೇಲಣ ತಪ್ಪೋ।
ನಾರಾಯಣ ನಿನ್ನ ನಟನೆಯ ತಪ್ಪೋ || ೧

ತೊಂಡು ಮೇವ ಪಸುವಿಂಡಿನ ತಪ್ಪೋ।
ಕಂಡು ಕಾಯದ ತುರುಗಾವನ ತಪ್ಪೋ।
ಗಂಡುಮೀರುವೆನ್ನ ಗರ್ವ್ವಿಯ ತಪ್ಪೋ।
ಕೊಂಡಾಳುವ ನಿನ್ನ ಕೂರ್ಮೆಯ ತಪ್ಪೋ || ೨

ಬಾಗಿಯು ಒಳಸುವ ಪಸುಳೆಯ ತಪ್ಪೋ।
ತಾ ವಂದು ತಡೆಯದ ತಾಯಿಯ ತಪ್ಪೋ।
ಈ ವಿಷಯಕೆ ಮುಗ್ಗುವೆನ್ನದು ತಪ್ಪೋ।
ಆವೇಳೆಗಾಪುಗೆಯ್ಯದ ನಿನ್ನ ತಪ್ಪೋ || ೩

ಗುರಿಯ ತಾಕದ ಮೊನೆಗೋಲಿನ ತಪ್ಪೋ।
ಕುಮತಿಸೆಯದ ಬೀರಗುವರನ ತಪ್ಪೋ।
ಒಲುಗೆಯ್ಮೆಗೆಯ್ಸೆನ್ನ ಭಾವದ ತಪ್ಪೋ।
ಅರಿವುದೋರಿಸದ ನಿನ್ನಾಟದ ತಪ್ಪೋ || ೪

ಓಜೆಗುಂದುವ ವೀಣೆಯುಲಿಹಿನ ತಪ್ಪೋ।
ಬಾಜಿಸುವನ ಕೈಯ್ಯ ಪರ್ವಣಿನ ತಪ್ಪೋ।
ರಾಜಶ್ರೀಚಿಕದೇವರಾಯನಿಗೊಲಿದ ಶ್ರೀ।
ರಾಜಗೋಪಾಲ ನಿರಾಕರಿಸದೆ ಪೇಳು || ೫ —೪—

ವಚನ || ಈಐದನೆಯ ತ್ರಿಪದಿಯೊಳ್ ಜಗದೀಶ್ವರಂ ಲೋಕಗಳ್ಗೆ ದುರ್ಲಭನಾದೊಡಂ ತನ್ನಂ ನಂಬಿದವರ್ಗೆ ಸುಲಭನಾಗಿ ಸಿಕ್ಕಿ ಸರ್ವಾಭೀಷ್ಟಮನೀವನೆಂಬುದಂ ನಿರವಿಸುವರ್.

ಎಱೆಯ ಶ್ರೀಚಿಕದೇವೇಂದ್ರವರದ ನಿನ್ನ ।
ಮಱೆವ ಕೈವಲ್ಯಕೆ ಮನವಿಡೆನು ॥
ಈಸೆಱೆಯನೆಳಸಿ ನಿನ್ನ ಸೇವೆಯುಱಿದು ಗೆಯ್ವ ।
ಒಱುಯಾಗದೊಳಾನು ಪಡಲಾಱೆನು ಕೃಷ್ಣ ॥ ೩ —೬—

ವಚನ ॥ ಈಯೋಜನೆಯ ಪಾಟಪದಿಯೊಳ್ ತನ್ನಂ ನಂಬಿದವರಂ ವೈರಾಗ್ಯದೊಳಂ ಕರ್ಮಜ್ಞಾನಭಕ್ತಿಗಳೊಳಂ ಪ್ರಪತ್ತಿಯೊಳಂ ಕೊಱತೆಯು ಗೊಳ್ಳದವಾಭಾರಮನವರೊಳ್ ಪೊಱಿಸದೆ ತಾನೇ ಪೊತ್ತು ನಿರ್ವಹಿಸಿ ರಕ್ಷಿಸುವನೆಂಬುದಂ ನಿರವಿಸುವರ್.

॥ ರಾಗ—ಕೇದಾರಗೌಳ ॥

ಸಡೆಯುದಿರ್ಪವನಲ್ಲ ನಡೆವವನುಮಲ್ಲ । ನಡೆಯುದೆ ನಡೆವ ಒಱುನಟಿಗೆಯ ನಗೆನಗೆ ನಲ್ನಡತೆಗಳನಿತ್ತು ನಿನ್ನಾಳೆನಿಪುದೆನ್ನ ॥ ಪಲ್ಲವಿ ॥

ಚ ॥ ಒಡೆಯನಾಣತಿಮೆರಸಿರೂಱಗವಿದೇದು ಮನ ।
ವಿಡಿದು ಸತ್ಕರ್ಮಗಳನೊಡರಿಸುವೆನೊಮ್ಮೆ ॥
ಒಡಲೊಡವೆ ಪೊನ್ನೊಡಲ ಮಡದಿಮಕ್ಕಳ ಪೊರೆವ ।
ಸಡಗರದೊಳೀವಗೆಯ ಸಡಿಲಿಸುವೆನೊಮ್ಮೆ ॥ ೧

ಅಱುಯುದಿರ್ಪವನಲ್ಲ ಅಱಿವವನುಮಲ್ಲ । ಅಱಿಯುದಱಿತವನೆನಿಸುವಱು ಮರುಳಿಗೆನಗೆ ನಲ್ಲಱಿವನಸುಗೊಳಿಸಿ ನಿನ್ನಾಳೆನಿಪುದೆನ್ನ ॥ ಪಲ್ಲವಿ ॥

ಚ ॥ ಪೆಱತೆನಿಪ ತತ್ವಗಳ ಬಿತ್ತರವನಾರಯ್ದು ।
ನೆಱೆಯಿರುವ ಜೀವನನು ಚಿಂತಿಸುವೆನೊಮ್ಮೆ ।
ಒಱುಯ ವಿಷಯದ ಸವಿಗೆ ಬಸವಱಿದು ಸೊರ್ಕಿ ಮ ।
ಯ್ಮಱೆತು ಬೆಱ್ರಸೆ ಬೆಱೆತು ಮತಿಗಿಡುವೆನೊಮ್ಮೆ ॥ ೨

ಆಸೆಯಿಲ್ಲದವನಲ್ಲ ಆಸೆಗನುಮಲ್ಲ। ಆಸೆಯಿಲ್ಲೆಂದು ಪಲವಾಸೆಗೆಯ್ವೆನ್ನ ಬಯಲಾಸೆಯನು ಕಳೆದು ನಿನ್ನಾಳೆನಿಪುದೆನ್ನ ॥ ಪಲ್ಲವಿ ॥

ಚ ॥ ಈಸಕಲವಿಷಯಂಗಳಿರವನೆರ್ದೆಗೊಳಿಸಿ ಬಲು ।
ಪೇಸಿಕೆಯಿದೆಂದೊಡನೆ ಪೆಱದೆಗೆವೆನೊಮ್ಮೆ ॥
ಮೋಸದಿಂದವಱೊಳುಱೆ ಮುಱುಗಿ ಮುಂಗೆಟ್ಟು ಕಡು ।
ಗಾಸಿವಡೆದಳವಱಿದು ಖತಿಗೊಳುವೆನೊಮ್ಮೆ ॥ ೩

ನೇಹವಿಲ್ಲದವನಲ್ಲ ನೇಹಿಗನುಮಲ್ಲ। ನೇಹವಿಲ್ಲದ ಪುಸಿಯ ನೇಹಿಗನಿಗೆನಗೆ ನೆರೆನೇಹವನು ಬಳೆಸಿ ನಿನ್ನಾಳೆನಿಪುದೆನ್ನ ॥ ಪಲ್ಲವಿ ॥

ಚ ॥ ದೇಹಕರಣಗಳ ಬುದ್ಧಿಯನಿತ್ತವನಿಗೆ ದಾ ।
ಸೋಹಮೆಂದಕ್ಕಟೊಳು ಸೊರ್ಕುವೆನದೊಮ್ಮೆ ।
ಈಹದನನುಚಿದು ನಾನೆನ್ನದೆಂಬೀಕ್ಷೆಜದ ।
ಮೋಹದೊಳು ಕಾಲೂಱಿ ಮೊಗಗೆಡುವೆನೊಮ್ಮೆ ॥ ೪

ನಂಬದಿರ್ಪವನಲ್ಲ ನಂಬುವನುಮಲ್ಲ । ನಂಬದೇ ನಂಬಿದವನೆಂಬ ಡಂಬಕ
ಗೆನಗೆ ನಂಬುಗೆಯನಿತ್ತು ನಿನ್ನಾಳೆನಿಪುದೆನ್ನ ॥ ಪಲ್ಲವಿ ॥
ಚ ॥ ನಂಬಿ ಚಿಕದೇವೇಂದ್ರನಾಥಗೋಪಾಲನ ಪ ।
ದಾಂಬುಜವ ನಿರ್ಭರದೊಳನುಗೊಳುವೆನೊಮ್ಮೆ ।
ಕೊಂಬ ಪುರುಳುಂಬೂಟವೆಂಬ ಬಲೆಯಲುಕಿನೊಳು ।
ಪಂಬಲಿಸಿ ಫಲವನುಱೆ ಬಸವಳಿವೆನೊಮ್ಮೆ ॥ ೫

ನಾಲ್ಕನೆಯ ಸಪ್ತಪದಿ ಸಂಪೂರ್ಣಂ.



— ಸಪ್ತಪದಿ — V. —

ನೋಳ್ಪುದು ಸುರಾಸುರರ್ ಶರಧಿಯಂ ಕಡೆಯುತ್ತಿರಲಂತು ದಿಕ್ಕಿನೊಳ್ ।
ತರೆ ಕಪಿಲೆಯ್ದು ಸುರ್ಗನಸುಗೆಯ್ದು ಪಟ್ಟಂಕುಶ ಸುಂದರಾಬ್ಧಿಪ್ರಾಲ ।
ಕಿಡಿಪಿಪಿನ್ನದೆಸ್ಸೆಯ ಮುನ್ನಯರಾಟ್ ಸುರನುಂದಿ ಶೇಷಯೊಳ್ ।
ಪರಿತರೆ ಸ್ರೊಯ್ದು ಸ್ರೊಯ್ದು ಧರಟಂ ಬಳಗೆಯ್ದು ನಿಧಿಸ್ಸುವಿಕ್ರಮಂ ।

ಮಾಗಂ ಕಾಯ್ದು ನಿಸಂತರಾವೃತನಮಂಗತ್ರಸ್ತ್ರ ಸನ್ಯಾಸಮಂ
ಶಾರ್ಗರ್ ಭಾಷೆಸ ಸ್ರೊಯ್ದು ಚಿತ್ರನಘಸಪ್ತಕೀರ್ತಿಘೋಷಿಯಂ ।
ಜೇಗಂ ದಾವಜಿಕಾಕಪಾಂಕನಣಲಂ ಕಾಯ್ದಿಲ್ಲ ಪೇಕ್ಷವು ।
ಸ್ವಾಗಂ ಸ್ರೊಪಿಸವಾಕ್ಯದನಸ್ರತಿಮುಪರಂ ಮೋಚಿಸಿಜಕ್ರಮಂ ।

ವಚನ । ಈ ಐದನೆಯ ಸಪ್ತಪದಿಯೊಳ್ ಪ್ರಸನ್ನರ್ಗೆ ಶ್ರೀಮನ್ನಾ
ರಾಯಣನಲ್ಲದೆ ಕೇತ್ರೊಂದು ಗತಿಯಿಲ್ಲವೆಂಬುದಂ ಸಿರವಿಸುವರ್.

॥ ರಾಗ—ಯದುಕಲ ಕಾಂಬೋಧಿ ॥ ತಾಳ—ರೂಪಕ ॥

ಚೆಲ್ಲವಾಡದಿರೆನ್ನ ಸಲಹೊ ಪಕ್ಷಿತುರಂಗ । ವಲ್ಲಭ ವಾಸುದೇವಾ ॥
ಬಲ್ಲರ ಮಾತಿನ ಬರವಸದೊಳು ಬಂದೆ । ಒಲ್ಲೆನೆಂದೊಡೆದೊಡಮುಱಿದು
ಭೋಪವನಲ್ಲ ॥ ಪಲ್ಲವಿ ॥

ಚ॥ ಕಡಲೊಳು ನಡೆವ ಪಡಗಿನ ಕಂಭವ ।
ನಡರಿ ಸೇರಿದ ಪಕ್ಕಿಯಂದದಿಂದಾನು ॥
ಎಡಬಲದೊಳು ಬೇಱೊಂದಿರವುಗಾಣೆನು ನಿ ।
ನ್ನಡಿಗಳ ಸೇರಿದೆನನ್ಯವನಱಿಯೆನು ॥ ೧

ಮೊಳಗುಸಿಡಿಲುಗಳ ಮೋಹರದೊಳು ನೊಂದು ।
ಒಱಲಿ ಬಾನೊಳು ಪರಿಪರಿದು ಮುಗಿಲುಗಳಿಂ ॥
ದಿಱಿವ ಮೀಸಲ ನೀರನೆಳಸುತ ಬಾಯ್ಬಿಡು ।
ಮೆಳೆಯ ಚಾದಗಗೆ ನಾನೆಣೆಯೆನಿಸಿರ್ದೆನು ॥ ೨

ನೀತಿಯಾದೊಡಮನೀತಿಯಾದೊಡಮದ ।
ನೀಕ್ಷಿನೆಂದು ಬಂದಿದಿರಾಡಲಱಿಯದೆ ॥
ಭೂತಳಾಧಿಪನೆಂತು ಪೊರೆವೊಡಮವನಡಿ ।
ಗೋತು ಸೇರಿದ ಕುಳವೊಕ್ಕಲಂತಿರ್ದೆನು ॥ ೩

ಕಾರವೊಗರುಹುಳಿಕಹಿಗಳನಿತ್ತೊಡ ।
ಮೋರಂತೆ ಸವಿದದಱೊಳು ಭೇದವೆಣಿಸದೆ ॥
ಹಾರೈಸಿ ವೈದ್ಯನ ಹವಣನಾರಯ್ಯ ದ ।
ಹಾರೋಗಿಯಂತಾನು ಪದವಱಿದಿರ್ದೆನು ॥ ೪

ಒಲಿದು ಲಾಲಿಸಿದೊಡಮೊಲ್ಲದಿರ್ದೊಡಮೊಂದೆ ।
ನೆಲೆಯೊಳು ನಲ್ಲನ ನೆರೆನಂಬಿ ಬಾಳುವ ॥
ಕುಲದೊಳು ಪುಟ್ಟಿದ ಕುವರಿಯಂದದೊಳು ನಿ ।
ನ್ನೊಲವ ಕೂರ್ತಿರುವೆ ನಾನುೞಿದುದನಱಿಯೆನು ॥ ೫

ತಡೆಯಲಾಱದ ಕೋಪದಟ್ಟುಳಿಯಿಂದೊಮ್ಮೆ ।
ಬಡಿದು ನೂಕಿದ ತಾಯ ಒಱಿಯಿಂದ ತೊಲಗದೆ ॥
ಎಡೆವಿಡದದಱಂತವಳೆಱಕವನೆಳಸುವ ।
ಕಡುಗೂಸಿನಂದವ ಕೈವಿಡಿದಿರ್ದೆನು ॥ ೬

ಪರಿಪರಿ ಫಲಗಳ ಬಗೆಗೊಳಿಸದೆ ನಿನ್ನ ।
ಚರಣವ ಬಯಸುವ ಚದುರರಂತಾನು ॥
ತಿರುಮಲೆಯಾರ್ಯರ ದಿವ್ಯಕೃತಿಯನಿದ ।
ನಿರದೆ ಪಾಡುವೆನು ಕೇಳಿತರವನಱಿಯೆನು ॥ ೭

ಉಕಾಯ ಸಪ್ತಪದಿ ಸಂಪೂರ್ಣಂ.



## — ಸಪ್ತಪದಿ — VI. —

ಬಳಸಿಯುಮೆಸೊಂದುಗೂಡಿ ಪರಿತಂದ ರಿಪುಕ್ಷಿತಿಪಾಲವರ್ಗಮಂ |
ಘುಳಿಲನೆ ಪೊಯ್ದು ಸಂದೊಡೆದು ಕೀರ್ತಿಯಿಯಪ್ರತಿಮಂಗಿದಿರ್ಚಿದಾ ||
ಬಳಯುತರಪ್ಪ ಬಲ್ಕು ತುಪರಾಪನಸಂದುಲರಾಪಸಂ ಕರಂ |
ಮುಜುಗಿಸಿ ಪ್ರೈಮೆಸೆತ್ತ ನೆಸಳೊಪ್ಪುಗುವಿರಾಜಿಕದೇವಭೂವರಂ || ೧೩

ತಪ್ಪದೆ ಧಿಕ್ಕಿಯಪ್ಪ ಪೊರೆಯುಂ ಕೆಗೊಂಡಪಸತ್ತಣಿಂದಮೇ |
ತೂಂಕ್ಲ್ವಸೆತ್ತ ಭಾಗಸಗರಾಧಿಪಸಂ ವಿಜಯಾಪುರೀಶಸಂ ||
ಬಾಜಿಕ್ಕಿಣಸೆಂಟಿಸಂ ಪಿಡಿದು ಕೆಯ್ದು ಜೀಗೊಂಡುಜೀ ಪಾಡುಪಂತದಿಂ |
ಬಾಜ್ಯುಸಭೇದ್ಯವಿಕ್ರಮಸೆಸಲ್ ಸೆಜೀವಂ ಚಿಕದೇವಭೂವರಂ || ೧೪

ಪೆತಸ । ಜೀವನಾಜಸದು ಸಪ್ತಪದಿಯೊಳ್ ಪ್ರಸನ್ನಗೆ ಭಗವದ್ಗಸಾಸುಧನಮುಂ ತತ್ಕಿಂಕರಪ್ರತಿಯುಮುಸುಲ್ಲದೆ ಕೇಡಿತೂಂದು ಭೋಗಮುಂ ರುಜೆಸೆಂಬುದಂ ಸಿರೂಪಿಸುಪರ್.

॥ ರಾಗ— ಕಾಂಬೋಧಿ ॥ ತಾಳ ರೂಪಕ ॥

ನಿನ್ನ ನಲ್ಲದನ್ಯರನೆಣಿಪನೆ । ಆ । ಚಿನ್ನಿಗ ಪಟ್ಟಿಪುರಂಗ ಪಟ್ಟಣದ ಚೆಲುವ ಲಕ್ಷ್ಮೀನಾರಸಿಂಹ ಎನ್ನೊಡೆಯಾ ॥ ಪಲ್ಲವಿ ॥

ಚ ॥ ಜಲರುಹನಾಭ ನೀನು ಸಕಲ । ಜಗದೀಶನೆಂದು ತಿಳಿದು ಮಿಕ್ಕ । ನಳತೆಯ ನೆಲಸನಾಳುವ ದೇವರಿಗಾಸೆಬಗುವನೆಂತು ॥ ಕಳೆದು ಮೂಜಗದ ಕತ್ತಲೆಯನಿಲ್ಲವ । ತೊಳಗುವ ಸೂರ್ಯನ ತೋರ್ಮುಕೆಗಲರ್ದ । ಕಳೆವೆತ್ತ ಪೆಜವೊಳುದಾವರೆ ಮಿಂತು । ಬೆಳಗುವಿನ ಬೆಳಕಿಗೆ ಪೊಗರೇಱುವುದೆ ॥ ೧

ಪರಮಾತ್ಮ ನೀನು ಪರತತ್ವವೆಂದು । ಭಾವಿಸಿ ನಿನ್ನ ಬಯಸಿ ಮಿಕ್ಕ । ತರವಳಿದ್ಯೈವದಾಸೆಗೆ ಸಿಲುಕಿ ದಾಟುದಪ್ಪುವೆನೆಂತು ॥ ಧರದೊಳು ಕಡಲ ಬಳಿಗೆ ಪರಿವ । ಬಲುಪೊರೊಳೆಸೆವ ಬಿಂಕದ ಪೆರ್ಪೊಳೆ । ಮಿರಪ್ಪುಗೆಟ್ಟಿದರೊಳು ತೋಱುವ ಕಿಱುಹೊಕ್ಕರಣೆಯ ಬಾವಿಗೆ ಹವಣೆಸಿಸುವುದೆ ॥ ೨

ಸಿರಿರಾಣಿಯರಸ ನಿನ್ನ ದಿವ್ಯ । ಚರಣಾರವಿಂದದೊಳಗಿ ಮಿಕ್ಕ । ಮರುಳುದ್ಯೈವಗಳ ಮಾಯೆಗೆ ಸಿಲುಕಿ ಪ್ರೈಮುಜಿವಿರ್ಪೆನೆಂತು ॥ ಸರಸಿಯೊಳಲರ್ದ ಕೆಂದಾವರೆಗೆಱಗಿ । ಸವಿಪದಜೊಳುಗಂಪ ಸಂತಸದೊಳೊಗುಮಿಗೆ । ಪರವಶಗೊಂಡಿರ್ಪ ತುಂಬಿನಿಂಡು ಕೊಳವಳಿಕೆಗೆ ಪೋಲಿಕ್ಕಿ ಕೂರ್ತೆಱಗುವುದೆ ॥ ೩

ಪಱಿವಿನಿತಿಲ್ಲವೆನಿಸಿ ಪೆಱೆವ । ಪಾವನಚರಿತ ನಿನ್ನ ಭಜಿಸಿ । ಬಱಿಕಾಸು ಪಲವು ಬಣಗುದೆವದ ಭಜನೆಗೆಯ್ವನೆಂತು ॥ ತಿಳಿನೀರೊಳೆಸೆವ ಮಾನಸಸರಸಿಗೆಱಿದಲ್ಲಿ ನಲಿದು

ನಲವೇಱುವಂತೆ । ಪುಱಿತು ಪೊಲಸುಗಂಪುವೆತ್ತು ಪಾವಸೆಗೊಂಡ ಕೊಳಚೆವಳ್ಳದೊಳು ಕೂರ್ತೆಱಗುವುದೆ ॥ ೪

ಶ್ರೀವರ ನಿನ್ನ ಕಲ್ಯಾಣಗುಣವ ಭಾವಿಸಿ । (ಯಾನಂದವಡೆದು) ನಿನ್ನ ಬಯಸಿ ಮಿಕ್ಕ । ಗಾವಿಲ ದೈವದ ಗಡಣದಿರವ ಗಣನೆಗೆಯ್ವೆನೆಂತು ॥ ಮಾವಿನಿಂಬಣ್ಣ ಮಸವಾಱಿ (ಸವಿ)ಸವಿದು । ವೈಮಱೆದುಕ್ಕಿ ಸೊಕ್ಕಿಱುವರಗಿಳಿ । ಗಾವಳಿವಡೆದು ಕಾಗೆಗಳೆಱಗುವ । ಬೇವಿನ ಪಣ್ಗಾಸೆಪೆತ್ತೆಱಗುವುದೆ ॥ ೫

ಅಂಬುಜಲೋಚನ ಕೇಳು ನಿನ್ನ । ಕೃಪಾಮೃತಪಾನದಿ ತಣಿದು ಮಿಕ್ಕ । ಡೊಂಬಿ ದೈವಂಗಳ ಬೆಂಬಲ್ವಿಡಿದು ಪಂಬಲಿಸುವೆನೆಂತು ॥ ಅಂಬರತಲವನಡರಿ ಮುಗಿಲ । ಮುಂಬನಿಯುಂಡು ಸೊಕ್ಕುವ ಚಾದಗೆ । ಗುಂಬಚೆಂಬಿನೊಳು ತುಂಬಿರ್ದ ಸಟಿನೀರ ಕೊಂಬೆನೆಂದೆಣಿಸಿ ಕೂರ್ತೆಱಗುವುದೆ ॥ ೬

ಶ್ರೀನರಸಿಂಹ ನಿನ್ನಡಿಗೊಲಿದು । ತಿರುಮಲೆಯಾರ್ಯನುಸಿರ್ದ ಸರಸ । ಗಾನವನಾಲಿಸಿ ಮಿಕ್ಕ ದೈವಗಳ ಗನ್ನವ ಕೇಳ್ವೆನೆಂತು ॥ ಜೇನಿಗೆ ಸಾಸಿರವಡಿ ಸೊಗಸೆನಿಸುವ । ತೇಜದೊಳೆಸೆವ ಸೊದೆಯುಂಡು ಸೊಕ್ಕಿನಿಂ । ದಾನಂದದೊಳು ಬಾಳುವವರಿಳೆಯ ಪುಲು । ಮಾನಸರೂಟವ ಮನಗೊಳಿಸುವರೆ ॥ ೭

ಫಲಸಪ್ತಪದಿ ಸಂಪೂರ್ಣಂ.



## — ಸಪ್ತಪದಿ — VII —

ಇಡೆ ಕೆಯ್ಪಿಟ್ಟಿಯನೊಂದನೇ ಜಡಿದು ಸಿಂಸಿಂದಾಡುವರ್ ತಮ್ಮ ಕೆ |
ಯ್ಪಿಡಿವೊಳ್ಕ್ರಮವನೆಲ್ಲಮಂ ರಿಪುನೃಪರ್ ನೀಂ ಬಂತೆಯುಂಗೊಂಡು ಬೊ ||
ಬ್ಬಿಡುವಾಪಿರ್ಂದಿದಿರೇಱಿ ತಾಮಿದಿರಿಸರ್ ವ್ಯಾಸಮುತ್ರಿಶೀರ್ಷಂಗಳಿಂ |
ಸುಡಿ ನಿನ್ನಪ್ರತಿಮತ್ವಮೆಂತೊ ಚಿಕದೇವಾ ಬಲ್ಲರೊಳ್ ಬಲ್ಲಹಾ || ೧೫

ಇರದೊಱೆವಾಲಿನೀರ್ವೊನಲನಿಂಟಿ ತೃಷಾಭರಮಂ ನಿವಾರಿಪರ್ |
ಜರಿಮು ಕ್ರೊದಟ್ಟಿ ನೀಳ್ಮಡಿಯ ಪೆರ್ಮುಗಿಸುಕಿಂ ಬಿಸಿಲಾರ್ಪನಾಱಿಪರ್ ||
ಭರವಸದಿಂದೆ ನಂದಿಸುವೆವೆಂದೆರ್ಗೆಗಿಚ್ಚ ನರಾತಿಕಾಂತೆಯರ್ |
ಪರಿತರೆ ನಿನ್ನ ಬಲ್ಪಡೆ ಸೊಗಂಬಡುವರ್ ಚಿಕದೇವಭೂವರಾ || ೧೬

ವಚನ || ಇಂತಾಱುಂ ಸಪ್ತಪದಿಗಳೊಳ್ ದಿವ್ಯಾತ್ಮಗುಣಂಗಳನನುಭವಿಸಿ ಈ ಸಪ್ತಮಸಪ್ತಪದಿಯೊಳ್ ದಿವ್ಯಮಂಗಳವಿಗ್ರಹಗುಣಂಗಳನನುಭವಿಸುವರ್.

ರಾಗ—ಯದುಕುಲ ಕಾಂಬೋಧಿ ॥ ತಾಳ—ಝಂಪೆ ॥

ಕಂಗೊಳಿಸದಿರಲಾಱೆ ಕಣ್ಣ ಪುಣ್ಯದ ಬೆಳಸ। ಕಂಗೊಳಸದಿರಲಾಱನೆ। ಪೊಂಗೊಳಲ ನುಡಿಸುತಿರ್ಪೊತ್ತಿನೊಳು ಪುರವೀಧಿ। ಸಿಂಗರಿಸಿ ಮೆಱೆವ ಹರಿಯ ಸಿರಿಯ ॥ ಪಲ್ಲವಿ ॥

ಚ॥ ಕ್ರಮದಿ ಪಡುತೋಳ್ಮುಡಿಗಳೊಂದಿನಿಸು ಕೊಂಕಿನೊಳು ಕಮನೀಯವೆಂದೆನಿಸಿ ಮೆಱೆಯೆ। ಸಮತಳದಿ ನಿಂದಡಿಯ ಮುಂದೆ ಮತ್ತೊಂದಡಿಯ ನಾರ್ಜಿಯಂಗುಟವನೂಱು। ರಮಣೀಯರೇಖೆಯೊಳು ನಿಂದು ಕೊಳಲುಲಿಗೊಳುವ। ರಾಯಗೋವಳನ ತೋಱೆ ನೀಱೇ ॥ ೧

ಬಳಬಳಸಿ ಸಲಿಸಲಿವ ಬಾಲಕರ ಕೆಯ್ಯ ತಪ್ಪಳೆಯೊಳುಱೆ ಬಣ್ಣವೇಱು। ಕೆಳೆವಕ್ಕಳೆಡಬಲದೊಳೊಲಿದೂದುವೆಲೆಸುತ್ತಿನೊಳು ಸರವನೊಂದುಪೆರಸಿ। ಕೊಳಲ ಸುಜ್ಜಾರವ ಕೊನರಿಡಿಸಿ ಕುಡಿವರಿಯಿಸುವ। ಕುವರಗೋವಳನ ತೋಱೆ ನೀಱೇ ॥ ೨

ಮುತ್ತಕದೊಳೆಸೆವ ಕಾಟ್ಸರದ ಪೂಸನೆತಳಿರು ಕತ್ತುರಿಯ ಪೀಲಿ ಚಲಿಸೆ। ಸುತ್ತುವೆಳದುಂಬಿಗಳ ಸೊಬಗಿನೊಳು ಸಿಱುಗುರುಳು ಸುಱಿಯೆ ಮೊಗದಾವರೆಯೊಳ। ಚಿತ್ತಜಾವೇಶಮಂತ್ರಗಳ ಕೊಳಲಿಂದಳೆವ। ಚೆನ್ನಗೋವಳನ ತೋಱೆ ನೀಱೇ॥ ೩

ಕಳೆವೆತ್ತ ಕತ್ತುರಿಯ ವೀಣೆಯೊಡನೊಡನುಣ್ಮಿ ಕವಿವ ತನಿಗಂಪಿನಂತೆ। ಬಳೆವ ತಾನದ ಗಮಕಗತಿಯ ಸ್ವರಸಿರಿಗೆ ಪೊಗ ಬಗೆಬಗೆಯ ಭಾವವಡೆಯೆ। ಕೊಳಲಿಗಿಂದುಟಿಯ ಸವಿದೋಱುವೊಳುದನಿಗೊಳುವ। ಕೊನಬುಗೋವಳನ ತೋಱೆ ನೀಱೇ ॥ ೪

ಗುಡಿಗೊಳುವ ಕುಣಿವ ಕೊಂಕುವ ನಿಮಿರ್ವ ಚಳಕದೊಳು ಕುಡುವುರ್ವ ಕೋಟಲೆಗೊಳೆ। ಒಡನೊಲೆವ ತೊನೆವ ತೂಗುವ ಭರದಿ ಕನ್ನವುರ ಜಡಿದು ಕದಪಿನೊಳು ನಲಿಯೆ। ಬೆಡಗು ಮಿಗೆ ಶಿರವನೊಲೆದೊಲೆದು ವೇಣುವ ನುಡಿವ। ಬಿನದಗೋವಳನ ತೋಱೆ ನೀಱೇ ॥ ೫

ಕವಿವ ಕಡೆಗಣ್ಗೆ ಸೇರುವ ನೀಳ್ವ ನೆಲೆಗೊಳುವ ಕರಗುವರೆಮುಗಿವ ನಗುವ। ನೆವದಿ ತೆರೆಗೊಳುವ ತೇಲುವ ಪೊಳೆವ ಪೊಗರೊಗುವ ನೇಹದಿನಿರಸದಿ ನನೆವ। ಸವಿನೋಟದಿಂದ ಕಣ್ಮನವ ಕೈಸೆಱೆಗೊಳುವ। ಚದುರಗೋವಳನ ತೋಱೆ ನೀಱೇ॥

ಹರವಿರಿಂಚರ ಬಗೆಗೆ ಪವಣೆನಿಸದಾನಂದದಿರವ ಗೊಲ್ಲರ ಬೀಡಿನ। ನೆರೆಹೊರೆಯ ಪಲವು ಮರ ಮೊರಡಿ ಮಿಗ ಪಕ್ಕಿ ಕಱು ತುಱುಗಳಿಗೆ ಸೂಱೆಗೊಳಿಸಿ। ತಿರುಮಲಾರ್ಯರ ಮನವ ನೆಲೆವೀಡುಗೊಂಡೆಸೆವ। ದೇವಗೋವಳನ ತೋಱೆ ನೀಱೇ ॥ ೭.

ಮೂರ್ತಿಧ್ಯಾನ ಸಪ್ತಪದಿ ಸಂಪೂರ್ಣಂ.



ವೃ ॥ ವಲಿತಾರಾತಿಸಿರಾಙ್ಕುರಪ್ರತಿಸರಾಲಂಕಾರೆ ಸಂಭಿನ್ನಕೃ ।
ತ್ತಿ ಲಸಚ್ಛಿತ್ರಪಟೀಪರೀತೆ ರಿಪುಹೃತ್ಪಂಕೇರುಹೋತ್ತಂಸಮುಂ ॥
ಜುಲೆ ಸೊಂಪಿಂ ಚಿಕದೇವಖಡ್ಗವಧು ಗಾಢೋತ್ಸಾಹದಿಂ ದುಹೃರ್ವಾಂ ।
ತ್ರುಬತಾಮಾಲೆಯನಿಟ್ಟಳಂದು ಜಯಕಾನ್ತಂಗಾಹವೋದ್ವಾಹದೊಳ್ ॥ ೧೭

ವಳಿತಾರೀಭಶಿರಃಕಪಾಲತತಿಭೃಂಗಾರಂಗಳಂ ವಿದ್ವಿಷ ।
ಗ್ಗಳಶೃಂಗಂಗಳಸಂಸಖಂಡಿತಸಿರಾವಂಶಂಗಳಂ ದೇಸಿಯಿಂ ॥
ತಳೆದೊಳ್ಪಿಂ ಚಿಕದೇವಖಡ್ಗವಧು ರಕ್ತಾಸಾರಕಾಶ್ಮೀರದಿಂ ।
ಕುಱಿಯಂ ಸೂಸಿದಳಾಹವೋತ್ಸವದೊಳಾಶಾಕಾಮಿನೀಬೃಂದದೊಳ್ ॥ ೧೮

ಬಳೆಯುತ್ತೆ ಲೀಲೆಯೊಳ್ ಕರಚನುತ್ಕೃತಿಯಿಂ ಚಿಕದೇವ ತಾವಕಾ ।
ಸಿಲಲನೆ ಸಂಗರಾಂಗಣದೊಳೊಳ್ಪಸನೇಱ್ ಪೊಸಗೆಲ್ಲವೆಣ್ಣುಮು ।
ಗ್ಗಲಿಸೆ ಗತಾಗತಕ್ರಮದೆ ಜ್ಯತಜಿದಾವಜಿಕಾಕಪಾದಿಮು ।
ಲ್ಱಲಿತಮರಾಟರೊಳ್ವಡೆಯ ಪಂದಳಿಯಿಂ ತಿರಿಕಲ್ಲನಾಡಿದಳ್ ॥ ೧೯

॥ ಲಯಗ್ರಾಹಿ ॥

ಬಡು ದೆಸೆಯೊಳ್ ತುರುಕರೊಂದು ಕಡೆಯೊಳ್ ಮೊರಸ
ರೊಂದೆಡೆಯೊಳಾರೆಯರ ಬಿಂದಮುಳವಿಂ ಬೇ ।
ಱೊಂದು ಬಱಿಯೊಳ್ ತಿಗುಳರೊಂದಿರವಿನೊಳ್ ಕೊಡಗ ।
ರೊಂದು ಕೆಲದೊಳ್ ಮಲೆಪರೊಂದುವೆರೆದೆಲ್ಲರ್ ॥
ಸಂದಣಿಸಿ ಕಾಳೆಗಕೆ ಮುಂದುವರಿವನ್ನಮವ
ಟಂದವರ ಘಟ್ಟುಗಳ ಪಂದಳಿಗಳಂ ದಿ ।
ಗ್ಬೃಂದಬಲಿಯಿತ್ತು ಸಲವಿಂದೆ ಚಿಕದೇವನೃಪ ।
ನಂದಮಿಗೆ ಪೆರ್ಜಸಮನೊಂದಿ ಸೊಗವಾೞ್ಗುಂ ॥ ೨೦

॥ ಗದ್ಯಂ ॥

ಇದು ಸಕಲಜಗದುದಯವಿಭವಾದಿಲೀಲನುಂ, ಲಕ್ಷ್ಮೀಲೋಲನುಂ, ಅಖಿಲಹೇಯಪ್ರತ್ಯನೀಕನುಂ, ಅಪ್ರಾಕೃತಪ್ರತೀಕನುಂ, ಅವಾಪ್ತಸಮಸ್ತಕಾಮನುಂ, ಅನಂತಕಲ್ಯಾಣಗುಣಗಣಾರಾಮನುಂ, ಸಾರಸಭವಪೂಜಿತನುಂ, ಸನಕಮುನಿಸಭಾಜಿತನುಂ, ಯದುಶಿಖರಿಶಿಖರಾಲಂಕಾರನುಂ, ಯತಿರಾಜಸಂಪತ್ಕುಮಾರನುಂ, ಆಶ್ರಿತರಕ್ಷಾಪರಾಯಣನುಮಪ್ಪ ಯಾದವಗಿರಿ ನಾರಾಯ

ಣನಡಿದಾವರೆಯುಗದೊಳ್ ಬಳೆದೋಱ್ಗಿವಳೆದ ಯಾದವಕುಲೋದ್ಧಾರಕನುಂ, ಶುಭಗುಣೋದ್ಧಾರಕನುಮಾದ ದೇವರಾಜನೃಪಾಲಪೌತ್ರನುಂ, ಅತ್ರಿಗೋತ್ರಪವಿತ್ರನುಂ, ದೊಡ್ಡದೇವರಾಜ ಗರ್ಭಾಂಬುಧಿಕಲಾಧರನುಂ, ಸಕಲಕಲಾಧರನುಂ, ಅಶ್ವಾರೋಹಣಕಲಾರೇವಂತನುಂ, ಗಜಾರೋಹಣಮಘವಂತನುಂ, ಅಸ್ತ್ರವಿದ್ಯಾಭೃಗುರಾಮನುಂ, ಅಪ್ರತಿಮಧಾಮನುಂ, ಕರ್ಣಾಟಭೂಮಂಡಲಾಧೀಶನುಂ, ದೇವಸಂಕಾಶನುಂ, ಪಶ್ಚಿಮರಂಗಪುರಸಿಂಹಾಸನಾಧಿಷ್ಠಿತನುಂ, ಸುಪ್ರತಿಷ್ಠಿತನುಂ, ದೇವಬ್ರಾಹ್ಮಣಪರಿಪಾಲನೈಕಾನ್ತನುಂ, ಸಕಲಪ್ರಜಾಕಾನ್ತನುಂ, ಅಸಕೃದಾವರ್ತಿತಷೋಡಶಮಹಾದಾನನುಂ, ಆಶ್ರಿತಸರ್ವಶ್ರೇಯೋನಿಧಾನನುಂ, ರಸಿಕಜನಕರ್ಣರಸಾಯನೀಕೃತಸಂಗೀತವಿಸ್ತರನುಂ, ಸಾಹಿತ್ಯವಿದ್ಯಾನಿಕಷಪ್ರಸ್ತರನುಂ, ಪೂರ್ವದಿಗ್ವಿಜಯಯಾತ್ರಾವಿತ್ರಾಸಿತ ಚೇದಿಮಂಗಲೋಪಾನ್ತ ಕಾನ್ತಾರೋಪಗೂಢವ್ಯೂಢಸೇನಾಭಿಗುಪ್ತ ಪಾಂಡ್ಯಸೇನಾಧಿಪ ಸಂಗರಕಿರೀಟ ವೆಂಕಟಕೃಷ್ಣ ಶಿಬಿರಸರ್ವಸ್ವಹರಣಸಮಸಮಯಸಮಾಕ್ರಾನ್ತ ಮಳಲಿ ಪರಮತ್ತಿ ಶಾಲೆಯ ಚೇದಿಮಂಗಲ ಕೊಂಗು ಧಾರಾಪುರಾದಿ ಪಾಂಡ್ಯನೃಪ ದುರ್ಗಮದುರ್ಗಸ್ತೋಮನುಂ, ಸಂಗರಭೀಮನುಂ, ಉದ್ವೃತ್ತಸುರತ್ರಾಣಚಮೂವಿಕ್ಷೋಭಣವಿಚಕ್ಷಣ ವಿಕಟಮರಾಟ ಶಿವಾಜಿ ವಾಜಿಸೇನಾಧಿಪ ಜಯತಜಿಕಾಟಕರ ದಾದಜಿಕಾಕಡ ಪ್ರಮುಖಕಂಠನಾಳೋಚ್ಛಲದ್ರಕ್ತಧಾರಾಸಿಕ್ತಕೃಪಾಣಸಂದರ್ಶನವಿಲೀನಹರಜಿ ಸಂತಜಿ ಮುಖ್ಯಮಹಾರಾಷ್ಟ್ರನೃಪಪ್ರವೇಕನುಂ, ಅಪ್ರತ್ಯನೀಕನುಂ, ಗಂಭೀರೋದ್ಧತಪರಿಘಾವರಣಭೀಷಣಶತಘ್ನೀ ಶತಸಂಕುಲಮತ್ತ ಮಾವಳಿ ಸೇನಾವಳೀವರ್ಮಿತಧರ್ಮಪುರೀಪ್ರಸಭಾಕ್ರಮಣಶ್ರವಣನಿರ್ಜನೀಕೃತ ಕೆಂಗೇರಿ ವಾಮಲೂರು ಬೇವುಹಳ್ಳಿ ಬೈರನೆತ್ತ ಕುನ್ನತ್ತೂರ್ ಮುಖ್ಯದುರ್ಗವರ್ಗನಿರಾಯಾಸಾಕ್ರಮಣನಿರ್ವೃತನಿಜಸೈನಿಕಸಮೂಹನುಂ, ಆಹವಕಲಾಶ್ವೇತವಾಹನನುಂ, ದಕ್ಷಿಣದಿಗ್ವಿಜಯಯಾತ್ರಾವಿತ್ರಾಸಿತ ಪಲಾಯಿತ ಪಾಂಡ್ಯಬಲಾನುಧಾವನಶ್ರಾನ್ತನಿಜಬಲವಿಶ್ರಾನ್ತಿಸ್ಥಾನೀಕೃತ ಜಲಧಿವೇಲಾತಮಾಲಾರಣ್ಯನುಂ, ಆನತಜನಶರಣ್ಯನುಂ, ಪಶ್ಚಿಮದಿಗ್ವಿಜಯಪ್ರಸ್ಥಾನ ಭೇರೀರವಾಕರ್ಣನಸಂಭ್ರಾನ್ತದುರ್ದಾನ್ತಹುಶಾನಖಾನಸನಾಥ ಕೆಳದಿನೃಪ ಸಮರ್ಪಿತ ಸರ್ವಸ್ವನಿರ್ವಾಪಿತಕೋಪನುಂ, ಅಮಿತಪ್ರತಾಪನುಂ, ಉತ್ತರದಿಗ್ವಿಜಯ

ಸಮಯಾಭಿಯಾತ ಕುತುಪಶಾಹ ವಾಹಿನೀವಿಮರ್ದನ ಕ್ಷಣಾಕ್ರಾಂತ ಕಂಡಿಕೆರೆ ಚಿಕ್ಕನಾಯಕನಹಳ್ಳಿ ಹೊನ್ನವಳ್ಳಿ ಸಾರತವಳ್ಳಿ ತುಱುಗೆರೆ ಪ್ರಮುಖ ದುರ್ಗ್ರಹಪ್ರಾಕಾರವಾರನುಂ, ಅಸಹಾಯಶೂರನುಂ, ಜಡಕನದುರ್ಗಹಠಾದ್ಗ್ರಹಣವೇಳಾನಿಖಾತಸುರಂಗಮುಖಾನಲೋತ್ಕ್ಷಿಪ್ತಗಂಡೋಪಲಪಾತನಿರ್ಧೂತ ಬಿಜ್ಜವರ ಮದ್ದಗಿರಿ ಚೆನ್ನರಾಯದುರ್ಗ ವೀರಣದುರ್ಗಾದ್ಯಸಂಖ್ಯದುರ್ಗವರ್ಗಾಕ್ರಮಣಾವಸರಾವನತಸಾಮಂತನೃಪಾಲಮೌಳಿಮಣಿಘೃಣೀನೀರಾಜಿತಪದರಾಜೀವನುಂ, ಮಹಾನುಭಾವನುಂ, ಸಾಹಜಿಮುಖಮರಾಟನೃಪರಾಜಧಾನೀಕೃತಾಭಂಗುರಬೆಂಗಳೂರ್ ಹರಣ ನಿಷ್ಪ್ರಾಣಿತ ಶಂಭುಜಿ ಶಾಹಜಿ ಸಂತಜಿ ಹರಜಿ ಪ್ರಮುಖ ಮಹಾರಾಷ್ಟ್ರ ನೃಪಾಲಜಾಲನುಂ, ರಿಪುಕುಲಕಾಲನುಂ, ಸಂಗ್ರಾಮರಾಮನುಂ, ಸಾಹಸೋದ್ದಾಮನುಂ, ಪ್ರಾಥಪ್ರತಾಪನುಂ, ಪ್ರಕಟಿತಾಟೋಪನುಂ, ಅಮಿತಪರಾಕ್ರಮನುಂ, ಅಭೇದ್ಯವಿಕ್ರಮನುಂ, ಕರ್ಣಾಟಚಕ್ರವರ್ತಿಯುಂ, ಕಲ್ಯಾಣಕೀರ್ತಿಯುಂ, ಲೋಕೈಕವೀರನುಂ, ವೀರರೊಳ್ಗಂಡನುಂ, ಗಂಡರೊಳ್ಗಂಡನುಂ, ಅಂತೆಂಬರ ಗಂಡನುಮೆನಿಸಿ ನೆಗೞ್ದ ಶ್ರೀಮದಪ್ರತಿಮವೀರನರಪತಿ ಶ್ರೀ ಚಿಕದೇವಮಹಾರಾಜ

ವಿರಚಿತಮಪ್ಪ

ದಿವ್ಯಪ್ರಬಂಧಂಗಳೊಳ್

ಶ್ರೀ ಗೀತಗೋಪಾಲ ಮಹಾಪ್ರಬಂಧದೊಳ್

ಉತ್ತರಭಾಗಂ ಸಂಪೂರ್ಣಂ.

→ ಗೀತಗೋಪಾಲಂ ಸಮಾಪ್ತಂ. ←

